# ನೆಲ್ಲಿಕಾರು ಜೈನ ಮಹಿಳೆ 'ರಾಧಮತಿ'
# ಬದುಕು - ಬರಹ



ಕನ್ನಡ ವಿಶ್ವವಿದ್ಯಾನಿಲಯಕ್ಕೆ
ಎಂ. ಫಿಲ್ ಪದವಿಗಾಗಿ ಅರ್ಪಿಸಿದ
ಸಂಪ್ರಬಂಧ




ಸಂಶೋಧಕರು
ಜೀವಿತಾ. ಡಿ.





ಮಾರ್ಗದರ್ಶಕರು
ಡಾ। ಸತ್ಯನಾರಾಯಣ ಮಲ್ಲಿಪಟ್ಟಣ
ಕನ್ನಡ ಪ್ರಾಧ್ಯಾಪಕ, ವಿಶ್ವವಿದ್ಯಾನಿಲಯ ಕಾಲೇಜು
ಮಂಗಳೂರು.





ಡಾ। ಹಾ.ಮಾ.ನಾ. ಸಂಶೋಧನಾ ಕೇಂದ್ರ
ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ
(ಕನ್ನಡ ವಿಶ್ವವಿದ್ಯಾಲಯ, ಹಂಪಿ)

# ನೆಲ್ಲಿಕಾರು ಜೈನ ಮಹಿಳೆ 'ರಾಧಮತಿ' ಬದುಕು - ಬರಹ

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್ ಪದವಿಗಾಗಿ ಅರ್ಪಿಸಿದ ಸಂಪ್ರಬಂಧ

ಸಂಶೋಧಕರು

ಜೀವಿತಾ. ಡಿ.



ಮಾರ್ಗದರ್ಶಕರು

ಡಾ| ಸತ್ಯನಾರಾಯಣ ಮಲ್ಲಿಪಟ್ಟಣ

ಕನ್ನಡ ಪ್ರಾಧ್ಯಾಪಕ, ವಿಶ್ವವಿದ್ಯಾನಿಲಯ ಕಾಲೇಜು

ಮಂಗಳೂರು.



ಡಾ| ಹಾಮಾನಾ ಸಂಶೋಧನಾ ಕೇಂದ್ರ
ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ

( ಕನ್ನಡ ವಿಶ್ವವಿದ್ಯಾಲಯ , ಹಂಪಿ )

## ದೃಢೀಕರಣ ಪತ್ರ

ಶ್ರೀಮತಿ ಜೀವಿತಾ.ಡಿ, " ನೆಲ್ಲಿಕಾರು ಜೈನ ಮಹಿಳೆ ' ರಾಧಮತಿ ' ಬದುಕು ಬರಹ " ಸಂಪ್ರಬಂಧವನ್ನು ಎಂ. ಫಿಲ್ ಪದವಿಯ ಆಂಶಿಕ ಪೂರೈಕೆಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿರುತ್ತಾರೆ. ಈ ಪ್ರಬಂಧವು ಸಂಶೋಧಕರ ಸ್ವಂತ ಸಂಶೋಧನೆಯಿಂದ ರೂಪುಗೊಂಡಿದೆ ಈ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಯಾವುದೇ ಪದವಿಗಾಗಲಿ, ಇತರ ಉದ್ದೇಶಗಳಿಗಾಗಲಿ ಇವರು ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 16.05. 2007

ಸ್ಥಳ : ಮಂಗಳೂರು.

ಮಾರ್ಗದರ್ಶಕರು

ಡಾ|| ಸತ್ಯನಾರಾಯಣ ಮಲ್ಲಿಪಟ್ಟಣ
ಕನ್ನಡ ಪ್ರಾಧ್ಯಾಪಕ, ವಿಶ್ವವಿದ್ಯಾನಿಲಯ ಕಾಲೇಜು
ಮಂಗಳೂರು

## ಘೋಷಣಾಪತ್ರ

" 'ನೆಲ್ಲಿಕಾರು ಜೈನ ಮಹಿಳೆ ' ರಾಧಮತಿ ಬದುಕು ಬರಹ " ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಎಂ. ಫಿಲ್ ಪದವಿಯ ಆಂಶಿಕ ಪೂರೈಕೆಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರಿಗೆ ಸಲ್ಲಿಸಿರುತ್ತೇನೆ. ಡಾ. ಸತ್ಯನಾರಾಯಣ ಮಲ್ಲಿಪಟ್ಟಣ ಪ್ರಾಧ್ಯಾಪಕರು, ಕನ್ನಡ ವಿಭಾಗ, ವಿಶ್ವವಿದ್ಯಾಲಯ ಕಾಲೇಜು, ಮಂಗಳೂರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಈ ಪ್ರಬಂಧವನ್ನು ಪೂರ್ಣವಾಗಿಯಾಗಲೀ, ಇದರ ಯಾವುದೇ ಭಾಗವನ್ನಾಗಲಿ ಈ ಮೊದಲು ಯಾವುದೇ ಪದವಿಗಾಗಲಿ, ಇತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ : **16.05. 2007**

ಸ್ಥಳ : ಮಂಗಳೂರು.

ಸಂಶೋಧನಾ ವಿದ್ಯಾರ್ಥಿ

ಜೀವಿತಾ. ಡಿ.

ಜೀವಿತಾ. ಡಿ.

ಡಾ|| ಹಾಮಾನಾ ಸಂಶೋಧನಾ ಕೇಂದ್ರ

ಶ್ರೀಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ

# ವಿಷಯಾನುಕ್ರಮಣಿಕೆ

# ೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**1.1.0** ಪ್ರವೇಶ :- ಸಾಹಿತ್ಯ ಕ್ಷೇತ್ರದಲ್ಲಿ ಲೇಖಕರಿಗಿಂತ, ಲೇಖಕಿಯರು ಬಹಳ ಕಡಿಮೆ ಸಂಖ್ಯೆಯಲ್ಲಿ ಕೃತಿ ರಚನೆ ಮಾಡಿರುವುದು ಬಹಳ ಸ್ಪಷ್ಟವಾಗಿ ಗೋಚರಿಸುವುದು. ನಾವು ಕನ್ನಡ ಭಾಷಾ ಸಾಹಿತ್ಯದಲ್ಲಿಯು ಈ ಕೊರತೆಯನ್ನು ಕಾಣಬಹುದು, ಕೆಲವೇ ಕೆಲವು ಲೇಖಕಿಯರನ್ನು ಹೊಂದಿದ್ದು ಅದರಲ್ಲೂ ಜೈನ ಲೇಖಕಿಯರು ಬಹಳ ಕಡಮೆ.

ಪ್ರಾಚೀನ ಕಾಲದಲ್ಲಿ ಸ್ತ್ರೀಯ ಕರ್ತವ್ಯಗಳು ಮುಖ್ಯವಾಗಿ ಮನೆಗೆ ಸಂಬಂಧಸಿದ್ದವು ಅವಳು ಗೃಹಿಣಿ ಮತ್ತು ತಾಯಿಯಾಗಿ ಕಾರ್ಯನಿರ್ವಹಿಸುತ್ತಿದ್ದಳು. ಹಾಗಾಗಿ ಸ್ತ್ರೀಯರಿಗೆ ಸಾಂಪ್ರದಾಯಿಕವಾದ ವಿದ್ಯಾಭ್ಯಾಸ ತೀರ ಅಗತ್ಯವೆಂದೇನು ಪ್ರಾಚೀನರು ಭಾವಿಸಿರಲಿಲ್ಲ. ಆದ್ದರಿಂದ ಗಂಡಸರಿಗೆ ಹೋಲಿಸಿದರೆ ವಿದ್ಯಾವತಿಯರ ಸಂಖ್ಯೆ ಕಡಿಮೆಯೆಂದೇ ಹೇಳಬೇಕು. " ಆದರ ರಾಜಮನೆತನಗಳ ಸ್ತ್ರೀಯರು ವಿದ್ಯಾವತಿಯರಾಗಿ ಅವರಲ್ಲಿ ಕೆಲವರು ಗ್ರಂಥ ರಚನೆಗೂ ಕೈ ಹಾಕಿದ್ದಾರೆ ಇಮ್ಮಡಿ ಪುಲಿಕೇಶಿಯ ಸೊಸೆ ವಿಜ್ಜಿಕಾ ಕವಯತ್ರಿ " [೧]. " ಕರ್ನಾಟಕದಲ್ಲಿ ಜೈನಧರ್ಮ ಪ್ರಬಲವಾಗಿ ಉಳಿಯುವಲ್ಲಿ ನಮ್ಮ ನಾಡಿನ ಸ್ತ್ರೀಯರು ವಹಿಸಿದ ಶಕ್ತಿ ಮುಖ್ಯ, ಕನ್ನಡನಾಡಿನ ಆಳರಸರು ಸಾಮಂತರು, ಆಧಿಕಾರಿಗಳು, ಸಂಘಸಂಸ್ಥೆಗಳು, ಪ್ರಭಾವಶಾಲಿ ಸ್ತ್ರೀಯರೂ ಸ್ವಧರ್ಮ ಶ್ರದ್ಧೆಯನ್ನು ಉಳಿಸಿಕೊಂಡು, ಪರಧರ್ಮ ಪೋಷಕರಾಗಿ ವರ್ತಿಸಿದ ಔದಾರ್ಯದಿಂದಾಗಿ ಜೈನಧರ್ಮದ ಉಳಿವು ಬೆಳವಣಿಗೆ ಹೆಚ್ಚಿನ ಮಟ್ಟದಲ್ಲಿ ಸಾಧ್ಯವಾಯಿತು " [೨].

" ಜೈನ ಸ್ತ್ರೀ ಸಮಾಜದಲ್ಲಿ ಸಂಸಾರದಲ್ಲಿದ್ದು ಧರ್ಮ ಶ್ರದ್ದೆಯ ದೀಕ್ಷೆ ತೊಟ್ಟು ಜೈನ ಧರ್ಮದ ಕೀರ್ತಿಯನ್ನು ಬೆಳಗಿದ ಸ್ತ್ರೀವರ್ಗ ಸಂಸಾರದಲ್ಲಿದ್ದೂ ಸದ್ಗತಿಯನ್ನರಸಿದ ಶ್ರಾವಕಿಯರದು ಧರ್ಮಸಾಧನೆಯಲ್ಲಿ ಕಂತಿಯರು ಅನುಸರಿಸಬೇಕಾದಷ್ಟು ನಿರ್ಬಂದನೆ ಇವರಿಗಿಲ್ಲದೆ ಹೋದರೂ ಅವರಿಗೆ ತಕ್ಕಂತೆ ಹಲವು ನೀತಿ ನಿಯಮಗಳನ್ನು ಪಾಲಿಸಬೇಕಿತ್ತು. ತ್ಯಾಗದ ಮುಖಾಂತರ ಕಂತಿಯರು ಧರ್ಮಾಚರಣೆ ಕೈಗೊಂಡರೆ ಭೋಗದಲ್ಲಿದ್ದೂ ಧರ್ಮಕಾರ್ಯ ಪ್ರವರ್ತರಾದವರು ಈ ವರ್ಗ " [೩].

ಕೆಲವು ಮಹಿಳೆಯರಂತೂ ಜೀವನದುದ್ದಕ್ಕೂ ಧರ್ಮಕಾರ್ಯ ಮಾಡಿರಲಿ ಬಿಟ್ಟಿರಲಿ, ಪುರಾಣ ಕಾರ್ಯದಲ್ಲಿಯಾದರೂ ಹೆಚ್ಚು ಆಸಕ್ತಿ ವಹಿಸಿದಂತೆ ಕಾಣುತ್ತದೆ. ಸ್ತ್ರೀ ಜನ್ಮ ಮುಖೇನ ಧರ್ಮ ಕಾರ್ಯಗೈದು ಕರ್ಮ ಕಡಿಮೆ ಮಾಡಿಕೊಳ್ಳಬೇಕೆಂದು ಧರ್ಮ ಕಾರ್ಯವೆಸಗುವರು ಕಾಣಬರುತ್ತಾರೆ. ಕನ್ನಡ ಕೃತಿಗಳಲ್ಲಿ ಬರುವ ಮಹಿಳಾ ವರ್ಗದಲ್ಲಿ ಈ ದೃಷ್ಟಿಯನ್ನು ಕಾಣುತ್ತೇವೆ. " ಧರ್ಮ ಮುಖೇನ ಸಾಧನೆ ಕೈಗೊಂಡವರು ಕೆಲವರು ಆದರಲ್ಲಿ ೧೩ ನೆಯ ಶತಮಾನದ ಕಂತಿ ನಿಜವಾದ ಕಂತಿಯೇ ಆಗಿದ್ದ ಪಕ್ಷದಲ್ಲಿ ಅವಳ ಸಾಧನೆ ಮಿಗಿಲು. ದೋರನ ಆಸ್ಥಾನದಲ್ಲಿ 'ಅಭಿನವ ವಾಗ್ದೇವಿ' ಎಂಬ ಅಭಿದಾನ ಹೊಂದಿದವಳು ಕಂತಿ. ಬಾಹುಬಲಿಯ ನಾಗಕುಮಾರಚರಿತೆ, ದೇವರಾಜನ ರಾಜಾವಳಿ ಕತೆಯಲ್ಲಿ ಕಂತಿಯನ್ನು ಸ್ಮರಿಸಿದ ಕವಿಗಳು ಅವಳ ಕಂಠವೈಖರಿ ಜಾಣ್ಮೆಯನ್ನು ಮೆಚ್ಚಿರುವುದುಂಟು 'ಕಂತಿ ಹಂಪರ ಸಮಸ್ಯೆಗಳು' ಅವಳ ಪ್ರತಿಭೆಗೆ ಸಾಕ್ಷಿಯೆನಿಸಿವೆ.ಆವಳ ವಿದ್ವತ್ತನ್ನು ಪರೀಕ್ಷಿಸಲು ಹೊರಟ ಹಂಪ 'ನನಗೆ ನಮಸ್ಕಾರ ಮಾಡೆ ಕೈವಲ್ಯ ಸುಖಂ' ಎಂದು ವಾಕ್ಯ ಅಪೂರ್ಣಗೊಳಿಸಿದರೆ ಕಂತಿ 'ಜಿನನಿಗೆ ನಮಸ್ಕಾರ ಮಾಡೆ ಕೈವಲ್ಯ ಸುಖಂ' ಎಂದು ಪೂರ್ಣಗೊಳಿಸಿ ಹೇಳುವಲ್ಲಿ ಕಾವ್ಯ ಭಾವನೆಯಿಂದ ತುಂಬಿದ

ಪ್ರತಿಭಾ ಪೂರ್ಣ ಜೀವನ ಸಮಸ್ಯೆಗಳಾಗಿರದೆ ಅಕ್ಷರ ಪದ ವಾಕ್ಯಗಳ ಜೋಡಣೆಯಲ್ಲಿ ತೋರಬಹುದಾದ ಬುದ್ಧಿವಂತಿಕೆ ಹರಿತಗೊಳಿಸುವ ಚಮತ್ಕಾರಿಕೆ ಕಂತಿಯ ಮೂಲ ವ್ಯಕ್ತಿತ್ವವಾಗಿರುವುದನ್ನು ಗಮನಿಸಬೇಕು " [೬].

ಹೀಗೆ ಕಂತಿ, ಚಂದನಾಂಬಿಕೆ, ಹೊನ್ನಮ್ಮರ ನಂತರದ ಹೊಸಗನ್ನಡದ ಕಾಲದಲ್ಲಿ ಕಾಣಸಿಗುವ ಮತ್ತೋರ್ವ ಕವಯತ್ರಿಯೆಂದರೆ ಅಜ್ಞಾತರಾಗಿ ಎಲೆಯ ಮರೆಯ ಕಾಯಿಯಂತೆ ಆಗಿ ಹೋದ ಖ್ಯಾತ ಬರಹಗಾರ್ತಿ ಎಂದೆನಿಸಿಕೊಂಡ ನೆಲ್ಲಿಕಾರು ಜೈನ ಮಹಿಳೆ ಎನ್ನುವ ಕಾವ್ಯನಾಮದಲ್ಲಿ ಕಾವ್ಯವನ್ನು ರಚಿಸುವ ರಾಧಮ್ಮ ಎನ್ನುವವರು. ಅವರ ಬದುಕು ಬರಹವನ್ನು ಸಮೀಕ್ಷಿಸುವ ಉದ್ದೇಶವನ್ನು ನಾನು ನನ್ನ ಈ ಸಂಪ್ರಬಂಧದಲ್ಲಿ ಮಾಡಲು ಇಚ್ಛಿಸುತ್ತೇನೆ.

**1.2.0 - ಅಧ್ಯಯನದ ಉದ್ದೇಶ :-** ಕವಯತ್ರಿ ರಾಧಮತಿಯವರು ಗೃಹಲಕ್ಷ್ಮಿಯಾಗಿ, ಸುಸಂಸ್ಕೃತ ವಾತವರಣದಲ್ಲಿ ಬದುಕಿ ದೇವಸ್ತುತಿ, ಶೋಭಾನೆ, ನೀತಿ ಭೋದಕ ಕೃತಿಗಳನ್ನು ಅಭ್ಯಾಸ ಮಾಡುತ್ತಾ ಲೋಕಜ್ಞಾನಾನುಭವದಿಂದ ಆತ್ಮ ಸಂತೋಷ ಹಾಗೂ ಸ್ವಂತ ಆಸಕ್ತಿಯಿಂದ, ಪ್ರಾಕೃತ ಮತ್ತು ಸಂಸ್ಕೃತ ಭಾಷೆಯಲ್ಲಿರುವ ಪೂಜಾ ಸ್ತುತಿಗಳನ್ನು ಸರಳಗೊಳಿಸಿ ಜನಸಾಮಾನ್ಯರಿಗೆ ತಲುಪಿಸ ಬೇಕೆಂಬ ಇಚ್ಛೆಯಿಂದ ಓದು ಬರಹ ಹೆಚ್ಚೇನು ಇಲ್ಲದಿದ್ದರೂ ಜಾನಪದ ಗೀತೆಗಳ ಮಾದರಿಯ ಮೌಖಿಕ ಕಾವ್ಯ, ರಚನೆಯನ್ನು ಮಾಡುತ್ತಿದ್ದವರು. ೨೦ನೆಯ ಶತಮಾನದ ಆದಿಯಲ್ಲಿ ಕಾಣಿಸಿಕೊಂಡ ಏಕೈಕ ಕವಯತ್ರಿಯಾಗಿ ೧೮೯೯ - ೧೯೭೦ ರ ಈ ಜೀವಿತಾಕಾಲದಲ್ಲಿ ನೆಲ್ಲಿಕಾರು ಜೈನ ಮಹಿಳೆ ಎಂದೇ ಪ್ರಸಿದ್ಧರಾದ ರಾಧಾಮತಿಯವರು ಕಾಣಿಸಿಕೊಳ್ಳುತ್ತಾರೆ.

ದಕ್ಷಿಣ ಕನ್ನಡದ ಮೊದಲ ಲೇಖಕಿಯರ ಕುರಿತು, ಕರಾವಳಿ ಲೇಖಕಿಯರ ಸಂಘ ತಂದಿರುವ ಕೃತಿಯಲ್ಲಿನ ಕೃತಿಕಾರರು ಪ್ರಾಚೀನ ಕವಯತ್ರಿಯರ ಬಗ್ಗೆ ಚಿಂತಿಸುತ್ತಾ ಅವರ ಬಗ್ಗೆ ಮನಸ್ಸಿನಲ್ಲಿ ಮೂಡುವ ನೋವುಗಳನ್ನು ಅಭಿವ್ಯಕ್ತಿಸುತ್ತಾರೆ. " ಪುರುಷ ಪ್ರಧಾನದೊಳಗಿನ ಸಮಾಜ ಮಹಿಳೆಯರಲ್ಲಿ ಪ್ರತಿಭೆಯಿದ್ದರೂ ಅದನ್ನು ಹೊರ ಹೊಮ್ಮಿಸುವ ಅವಕಾಶವನ್ನು ಕೊಡದೇ ಇರುವುದು. ಕಳೆದು ಹೋದ ಸಮಯಕ್ಕೆ ಚಿಂತಿಸಿ ಫಲವಿಲ್ಲವೆನ್ನುವ ಹಾಗೆ ನವೋದಯದ ಆರಂಭದ ಘಟ್ಟದಲ್ಲಿ ಕಾಣಿಸಿಕೊಳ್ಳುವ ಕೆಲವು ಪ್ರತಿಭೆಗಳನ್ನು ಒಂದು ಕಡೆ ಸೇರಿಸುವ ಪ್ರಯತ್ನವನ್ನು ಮಾಡಿದರೆ ಅವರುಗಳು ಬರೆದ ಸಾಹಿತ್ಯ, ಬಾಲ್ಯ, ವಿದ್ಯಾಭ್ಯಾಸ, ಕೌಟುಂಬಿಕ ಚಿತ್ರಣ, ಪ್ರೇರಣೆ ಪ್ರಭಾವ ಅವರು ಅಜ್ಞಾತರಾಗಿ ಉಳಿದಿರಲು ಕಾರಣ ಇದರ ಕುರಿತು ತಿಳಿಯಲು ಈ ಪ್ರಯತ್ನ ಬಹಳ ಮಟ್ಟಿಗೆ ಯಶಸ್ವಿಯಾಯಿತು. ಆದರೆ ಆ ನಂತರದಲ್ಲಿಯೂ ಕೆಲವರು ನಿಗೂಢವಾಗಿಯೆ ಉಳಿದರು. ತಂದೆ ತಾಯಿ, ಅಣ್ಣ ತಮ್ಮಂದಿರ ಪತಿಯ ಪ್ರೋತ್ಸಾಹಗಳಿಂಧ ತಮ್ಮ ಅನುಭವಗಳನ್ನು ಚಿಂತನೆಗಳನ್ನು ಸಾಹಿತ್ಯದ ವಿವಿಧ ಪ್ರಕಾರಗಳಾಗಿ ಪ್ರಕಟಿಸಿ ಸಾಹಿತ್ಯದ ವ್ಯಕ್ತಿತ್ವಗಳಾಗಿರುವ ಅನೇಕ ಹಿರಿಯ ಬರಹಗಾರ್ತಿಯರು ನಮಗೆ ದೊರಕುತ್ತಾರೆ. ಇದು ಅವರಲ್ಲಿ ಸುಪ್ತವಾಗಿರುವ ಸ್ವಜನಶೀಲತೆಗೆ ಸಾಕ್ಷಿ " [೭].

ಇಂತಹ ಪ್ರಯತ್ನದಲ್ಲಿ ಅಜ್ಞಾತರಾಗಿದ್ದ ಬರಹಗಾರ್ತಿಯರನ್ನು ಕರಾವಳಿ ಲೇಖಕಿಯರ ಸಂಘದ ಈ ಪುಸ್ತಕ ಸಮಾಜಕ್ಕೆ ಸಾಹಿತ್ಯ ಕ್ಷೇತ್ರಕ್ಕೆ ಪರಿಚಯಸಿದೆ. ಈ ಹುಡುಕಾಟದಲ್ಲಿ ದ.ಕ. ಜಿಲ್ಲೆಯ ಹಲವು ಲೇಖಕಿಯರ ಸ್ಥೂಲವಾದ ಜೀವನ ಹಾಗೂ ಕೃತಿ ಪರಿಚಯವನ್ನು ಮಾಡಲಾಗಿದೆ . ಈ ಕೃತಿಯ ಮುನ್ನುಡಿಯಲ್ಲಿ ಚಂದ್ರಕಲಾ ನಂದಾವರ ಇವರು ದಕ್ಷಿಣ ಕನ್ನಡದ ಕವಯತ್ರಿಯರ ಕುರಿತು ಉಲ್ಲೇಖಿಸಿದ್ದಾರೆ [೮]. ಲೀಲಾಭಟ್ ರಾಧಮ್ಮನವರನ್ನು ಪರಿಚಯಿಸಿದ್ದಾರೆ. ಈ ಲೇಖನ ರಾಧಮ್ಮನವರ ಬದುಕು ಮತ್ತು ಸಾಹಿತ್ಯದ ಸಮಗ್ರ ಅಧ್ಯಯನವಲ್ಲ.

ಹೊಸಗನ್ನಡದ ಆರಂಭದ ಕಾಲದಲ್ಲಿ ಕೃತಿ ರಚಿಸುತ್ತಿದ್ದ ರಾಧಮ್ಮನವರ ಬದುಕು ಮತ್ತು ಬರಹಗಳನ್ನು ಸಮಗ್ರವಾಗಿ ಸಮೀಕ್ಷಿಸುವ ಉದ್ದೇಶವನ್ನು ನಾನು ಈ ಸಂಪ್ರಬಂಧದಲ್ಲಿ ಮಾಡಲು ಇಚ್ಛಿಸುತ್ತೇನೆ.

**1.3.0** - ಅಧ್ಯಯನದ ವಿಧಾನ :- ಕಮಲಾ ಹಂಪನಾ ಹೇಳಿದ ತೆಂಕನಾಡಿನ ಕನ್ನಡ ಕೋಗಿಲೆಯೆಂದೆನಿಸಿದ ರಾಧಮ್ಮನವರ ಕುರಿತು ದೊರಕುವ ಕೆಲವು ವಿವರವನ್ನೊಳಗೊಂಡ ಲೇಖನಗಳು ಅವರನ್ನು ಹತ್ತಿರದಿಂದ ಬಲ್ಲವರಾದ ದೇವಕುಮಾರ ಶಾಸ್ತ್ರಿಯವರು ಅವರ ಬಗ್ಗೆ ಹೇಳಿದ ಮಾತುಗಳು, ಹಿರಿಯ ಸಾಹಿತಿಯಾದ ಮಂಜೇಶ್ವರ ಗೋವಿಂದ ಪೈಯವರು ಬರೆದ ವಿಮರ್ಶಾ ಲೇಖನ, ಕಮಲಾ ಹಂಪನಾ ಅವರು ರಾಧಮ್ಮನ ಕುರಿತು ಬರೆದ ಲೇಖನ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯಲ್ಲಿ ಶ್ರೀಮತಿಯವರು ಇವರ ಕುರಿತು ಬರೆದ ವಿಚಾರ ಈ ಎಲ್ಲಾ ಲೇಖನಗಳನ್ನು ಗಮನಿಸಲಾಗಿದೆ. ಆದರೆ ಅವುಗಳು ರಾಧಮ್ಮನ ಸಾಹಿತ್ಯದ ಸಮಗ್ರವಾದ ಅವಲೋಕನ ಆಗಿರದೇ ಇರುವುದರಿಂದ ಅವರ ಸಾಹಿತ್ಯದ ಒಟ್ಟು ಸಮೀಕ್ಷೆಯನ್ನು ನನ್ನ ಸಂಪ್ರಬಂಧದಲ್ಲಿ ಮಾಡಲು ಇಚ್ಛಿಸುತ್ತೇನೆ. ರಾಧಮ್ಮನ ಹುಟ್ಟೂರು, ಗಂಡನ ಮನೆ, ಕಾರ್ಕಳದಲ್ಲಿ ವಾಸಿಸಿದ ಸಂದರ್ಭದಲ್ಲಿಅವರ ನಿಕಟವರ್ತಿಯಾಗಿ ಉಳಿದ ಕೆಲವು ವ್ಯಕ್ತಿಗಳು ಅವರ ಮಕ್ಕಳು , ಸಾಹಿತ್ಯಾಸಕ್ತರು ಇವರನ್ನೆಲ್ಲಾ ಭೇಟಿಯಾಗಿ ಅವರ ವಿಚಾರಗಳ ಕುರಿತು ತಿಳಿಯಲು ಪ್ರಯತ್ನಿಸಲಾಗಿದೆ. ಕ್ಷೇತ್ರಕಾರ್ಯ ಹಾಗೂ ಸಾಹಿತ್ಯ ಅಧ್ಯಯನ ಈ ಮೂಲಕ ಇವರ ಬದುಕು ಬರಹದ ಕುರಿತು ಮಾಹಿತಿಗಳನ್ನು ಪಡೆಯಲಾಗಿದೆ.

ರಾಧಮ್ಮನವರ ಬದುಕು ಬರಹಗಳ ಕುರಿತು ಈವರೆಗೆ ಬಂದಿರುವ ಲೇಖನಗಳು ಕೆಳಕಂಡಂತಿವೆ.

೧. ದಕ್ಷಿಣ ಕನ್ನಡದ ಮೊದಲ ಲೇಖಕಿಯರು - ರಾಧಮತಿ ಜೈನ ಮಹಿಳೆ - ಲೀಲಾ ಭಟ್

೨. ಬೊಗಸೆ ಮಹಿಳೆ (ಸುತ್ತ ಮುತ್ತ) - ಕಮಲಾ ಹಂಪನಾ - ಅಜ್ಞಾತ ಕವಿಯತ್ರಿಯರು

೩. ಬೊಗಸೆ ಮಹಿಳೆ (ಸುತ್ತ ಮುತ್ತ) - ಕಮಲಾ ಹಂಪನಾ- ತೆಂಕನಾಡಿನ ಕನ್ನಡ ಕೋಗಿಲೆ.

೪. ಕನ್ನಡ ಸಾಹಿತ್ಯಕ್ಕೆ ಮೂಡಬಿದ್ರೆ ಕೊಡುಗೆ - ವೈ. ಉಮಾನಾಥ ಶೆಣೈ - ರಾಧಮ್ಮ.

೫. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ - ಎಚ್. ಎಸ್. ಶ್ರೀಮತಿ - ೧೯೦೦ - ೧೯೫೦ ರ ವರೆಗಿನ ಮಹಿಳಾ ಸಾಹಿತಿಗಳು.

೬. ಹೆಬ್ಬೇರಿ - ಕಾರ್ಕಳ ತಾಲೂಕು ಮೂರನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ.

೭.. ಗೋವಿಂದ ಪೈ.ವಾಙ್ಮಯ ದರ್ಶನ - ಲಕ್ಷ್ಮೀಬಾಯಿ

**1.4.0** - ಅಧ್ಯಯನದ ವ್ಯಾಪ್ತಿ :- ಹೊಸಗನ್ನಡ ಸಾಹಿತ್ಯದ ಆರಂಭ ಕಾಲದ ಲೇಖಕಿ ರಾಧಮ್ಮನವರ ಬಗೆಗೆ ಲೇಖನಗಳಲ್ಲಿ ದೊರಕುವ ಮಾಹಿತಿಯೊಂದಿಗೆ ಅವರ ಸಂಬಂಧಿಕರು ಸಮಕಾಲೀನರುಗಳನ್ನು ಸಂದರ್ಶಿಸಿ ರಾಧಮ್ಮನವರ ಬದುಕನ್ನು ಪುನಾರಚಿಸುವ ಹಾಗೂ ಅವರು ಬರೆದಿರುವ ಸಾಹಿತ್ಯ ಅವರ ಕೃತಿಗಳ ಕುರಿತು ಲಭ್ಯ - ಅಲಭ್ಯ ಪ್ರಕಟಿತ ಅಪ್ರಕಟಿತ ಸಾಹಿತ್ಯದ ಕ್ರೋಢೀಕರಣ ಮತ್ತು ಅವುಗಳ ವಿಶ್ಲೇಷಣೆಯನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಹೊಸಗನ್ನಡ ಸಾಹಿತ್ಯ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳೆಯರ ಸಾಹಿತ್ಯವನ್ನು ಪ್ರಧಾನವಾಗಿ

ಚರ್ಚಿಸಲಾಗಿದೆ. ಜೈನ ಧರ್ಮ ಮತ್ತು ಮಹಿಳಾ ಸಾಹಿತ್ಯ ಸಂದರ್ಭದಲ್ಲಿ ಹಾಗೂ ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ರಾಧಮ್ಮನವರ ಕೃತಿಗಳ ಪ್ರಾಮುಖ್ಯತೆಯನ್ನು ಗುರುತಿಸಲು ಈ ಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ.

**ಟಿಪ್ಪಣಿಗಳು :-**

೧. ಎಂ. ಎ. ಕೃಷ್ಣರಾವ್, ಇತಿಹಾಸ ದರ್ಶಿನಿ, ಪುಟ ೧೧೯.

೨. ಧಾರಿಣಿ (ಸಂ), ಚೆನ್ನಕ್ಕ ಪಾವಟೆ (ಲೇ) , ರತ್ನಶ್ರೀ, ಪುಟ ೯೪.

೩. ಅದೇ, ಪುಟ ೯೫.

೪. ಕಮಲಾ ಹಂಪನಾ, ಬೊಗಸೆ, ಪುಟ ೧೬೫.

೫. ಮನೋರಮ ಭಟ್ ( ಸಂ) , ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಲೇಖಕಿಯರು, ಚಂದ್ರಕಲಾ ನಂದಾವರ - ಮೊದಲ ಮಾತು.

೬. ಅದೇ, ಮೊದಲ ಮಾತು.

## ೨. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೊಸಗನ್ನಡ ಸಾಹಿತ್ಯ : ಮಹಿಳಾ ಸಾಹಿತ್ಯವನ್ನು ವಿಶೇಷವಾಗಿ ಪರಿಗಣಿಸಿ.

**2.1.0 - ಪ್ರವೇಶ :-** " ಕನ್ನಡ ಕಾವ್ಯದ ಇತಿಹಾಸದಲ್ಲಿ ಅನೇಕ ಕಾವ್ಯ ಪ್ರಯೋಗಗಳು ನಡೆದಿವೆ. ಇಂತಹ ವೈವಿಧ್ಯಮಯವಾದ ಕಾವ್ಯ ಪ್ರಯೋಗಗಳು ಹತ್ತನೆಯ ಶತಮಾನದಲ್ಲಿ ಪಂಪ, ಬಸವಣ್ಣ, ಕುಮಾರವ್ಯಾಸರ ಕಾಲದಲ್ಲಿ ಮಾತ್ರವಲ್ಲದೆ ಇಪ್ಪತ್ತನೆಯ ಶತಮಾನದಲ್ಲಿಯೂ ನಡೆದಿದೆ. ಸೃಜನಶೀಲ ಚಟುವಟಿಕೆಗೆ ಪ್ರೇರಣೆ ಸಾಮಾಜಿಕ, ರಾಜಕೀಯ ರಂಗದಲ್ಲಾದ ಬದಲಾವಣೆಗಳು, ವಸಹತುಶಾಹಿ ಸಂಸ್ಕೃತಿಯ ಆಕ್ರಮಣ ಇವೆಲ್ಲವೂ ಮೂಲ ಕಾರಣವಾದರೂ ಅದು ಈ ಮೂರು ಪ್ರದೇಶಗಳಲ್ಲಿ ಉಂಟುಮಾಡಿದ ಪರಿಣಾಮ ಭಿನ್ನತೆಯಿಂದ ಕೂಡಿದ್ದು - ಮೈಸೂರು ಪ್ರದೇಶ, ಧಾರವಾಡ ಪ್ರದೇಶ ಹಾಗೂ ಮಂಗಳೂರು ಜಿಲ್ಲೆ ಅಥವಾ ದಕ್ಷಿಣ ಕನ್ನಡ ಜಿಲ್ಲೆ "[1].

**2.2.0 - ದಕ್ಷಿಣ ಕನ್ನಡ ಜಿಲ್ಲೆಯ ಹೊಸಗನ್ನಡ ಕಾವ್ಯದ ಹಿನ್ನೆಲೆ :-** ರತ್ನಾಕರವರ್ಣಿ , ಸೋಮರಾಜ ಮೊದಲಾದ ಕವಿಗಳ ಇತಿಹಾಸವಿರುವ, ಅನೇಕ ಯಕ್ಷಗಾನ ಕವಿಗಳ ಹಿನ್ನೆಲೆಯಿರುವ , ಭೂತಾರಾಧನೆ, ಯಕ್ಷಗಾನದಂತಹ ಪ್ರಮುಖ ಕಲೆಗಳಿಂದ ದಕ್ಷಿಣ ಕನ್ನಡ ಜಿಲ್ಲೆ ತನ್ನ ಪ್ರಭಾವವನ್ನು ಕಾವ್ಯಗಳ ಮೇಲೆ ಬೀರಿದೆ. ದಕ್ಷಿಣ ಕನ್ನಡ ಕಾವ್ಯದ ಹಿನ್ನೆಲೆ ಕರ್ನಾಟಕದ ಉಳಿದ ಪ್ರದೇಶಗಳಿಗೆ ಹೋಲಿಸಿದರೆ ದಕ್ಷಿಣ ಕನ್ನಡ ಜಿಲ್ಲೆ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದ್ದು ಭಿನ್ನವಾದ ರೀತಿಯಲ್ಲಿದೆ. ಇದಕ್ಕೆ ಈ ಜಿಲ್ಲೆಯ ಭೌಗೋಳಿಕ ರಚನೆಯೂ ಪ್ರಮುಖವಾಗಿ ಕಾರಣವಾಗಿದೆ. ಕರ್ನಾಟಕದ ದಕ್ಷಿಣ ಭಾಗದಲ್ಲಿ ಮಂಗಳೂರು ಇದೆ. ಒಂದು ಬದಿಯಲ್ಲಿ ಕೇರಳದ ಗಡಿ ಇದೆ. ದಕ್ಷಿಣ ಕನ್ನಡ ಜಿಲ್ಲೆಯ ಒಂದು ಅಂಗವೆಂಬತೆ ಇರುವ ಕಾಸರಗೋಡು ಕೇರಳ ರಾಜ್ಯಕ್ಕೆ ಸೇರಿದೆ. ಒಂದು ಕಡೆ ಪಶ್ಚಿಮ ಘಟ್ಟಗಳು ಬರುತ್ತಿವೆ. ಒಟ್ಟಿನಲ್ಲಿ ಈ ಕಾರಣ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಹುಭಾಷಿಕ ಸಮ್ಮಿಶ್ರ ಸಂಸ್ಕೃತಿ ಕಾಣಬಹುದಾಗಿದೆ. ಬೇರೆ ಬೇರೆ ಜಾತಿಯ ಜನರು ಇಲ್ಲಿ ಬದುಕುತ್ತಿದ್ದಾರೆ. ಜೈನರು, ಶೈವರು, ಕ್ರಿಶ್ಚಿಯನ್ನರು, ಮುಸ್ಲಿಮರು, ಹಾಗೆಯೇ ಬ್ರಾಹ್ಮಣರಲ್ಲಿನ ಅನೇಕ ಒಳ ಪಂಗಡಗಳು, ಒಕ್ಕಲಿಗರು, ನ್ಯಾಕರು, ಬಂಟರು, ಬಿಲ್ಲವರು, ಮೊಗವೀರರು, ಪರಿಶಿಷ್ಟ, ಜಾತಿಗಳಾದ ಅಜಿಲರು, ಮೇರರು, ದಿಕ್ಕರು, ಮಲೆಕುಡಿಯರು, ನಲಿಕೆಯವರು, ಮೊದಲಾದ ಜನಾಂಗಗಳು ಇಲ್ಲಿ ಕಾಣುತ್ತಿದ್ದು. ಅನೇಕ ಸಮುದಾಯದ ಜನ ಇಲ್ಲಿ ಬದುಕುತ್ತಿರುವುದು ಕಂಡುಬರುತ್ತದೆ . ಹಾಗೆಯೇ ಭಾಷೆಗಳು ಹಲವಾರು, ಈ ಕಾರಣ ಇಲ್ಲಿರುವ ಕನ್ನಡ ಭಾಷೆ ಗ್ರಂಥ ಭಾಷೆಯಾಗಿದೆ. ಇಲ್ಲಿ ತುಳು ಮಾತೃಭಾಷೆಯಾಗಿರುವುದಲ್ಲದೆ ಸಂಪರ್ಕ ಭಾಷೆಯಾಗಿರುವುದನ್ನು ಕಾಣಬಹುದು.

" ದಕ್ಷಿಣ ಕನ್ನಡದ ಕಾವ್ಯ ಭಿನ್ನವಾಗಿ ಸೃಷ್ಟಿಯಾಗುವುದಕ್ಕೆ ಮುಖ್ಯ ಕಾರಣ, ದಕ್ಷಿಣ ಕನ್ನಡದ ಜಾನಪದ ಸಂಸ್ಕೃತಿಯ ದಟ್ಟ ಪ್ರಭಾವ ಇದರ ಮೇಲಾಗಿದೆ. ಯಕ್ಷಗಾನ, ಭೂತಾರಾಧನೆಯಂತಹ ಜನಪ್ರಿಯ ಕಲಾಮಾಧ್ಯಮ ಜನರ ಬದುಕಿನ ಮೇಲೆ ದಟ್ಟವಾದ ಪ್ರಭಾವವನ್ನು ಬೀರಿರುವುದರಿಂದ ಅದು ಅವರ ಜೀವನ ಶೈಲಿಯಲ್ಲಿ ಕಾಣಿಸಿಕೊಳ್ಳುವುದು ಸಹಜವೇ ಆಗಿದೆ . ದಕ್ಷಿಣ ಕನ್ನಡ ಕಾವ್ಯ ಸ್ವರೂಪದ ನೆಲೆಗಳು ಯಾಕೆ ಬದಲಾಯಿತು ಎನ್ನುವುದನ್ನು ೧. ಐತಿಹಾಸಿಕ ನೆಲೆಗಳು ೨. ಸಾಮಾಜಿಕ ಬದಲಾವಣೆಗಳು ೩. ಸಾಂಸ್ಕೃತಿಕ ಪರಿಸರ ೪. ಸಾಹಿತ್ಯ ಚಟುವಟಿಕೆಗಳು "[2] - ಈ ಹಿನ್ನೆಲೆಗಳಲ್ಲಿ ಗಮನಿಸಬಹುದು ಎಂದಿದ್ದಾರೆ ಸಂತೋಷ ಚೊಕ್ಕಾಡಿಯವರು.

ದಕ್ಷಿಣ ಕನ್ನಡ ಜಿಲ್ಲೆಯ ಐತಿಹಾಸಿಕ ಅಂಶಗಳು ದಕ್ಷಿಣ ಕನ್ನಡದ ವಿಶಿಷ್ಟತೆಯ ಬಗ್ಗೆ ಕೆಲವೊಂದು ಸೂಕ್ಷ್ಮ ಅಂಶಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಕಳೆದ ಹತ್ತು ಶತಮಾನದ ಇತಿಹಾಸವನ್ನು ಗಮನಿಸಿದರೆ ಈ ಜಿಲ್ಲೆ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಗಾಗಿದೆ. ಹದಿನಾಲ್ಕನೆಯ ಶತಮಾನದವರೆಗೆ ಅಳುಪರು ನಂತರ ಹದಿನಾರನೆಯ ಶತಮಾನದವರೆಗೆ ವಿಜಯನಗರದವರ ಆಳ್ವಿಕೆ ಅನಂತರದ ಸಂದರ್ಭದಲ್ಲಿ ಅನೇಕ ಸಣ್ಣ - ಪುಟ್ಟ ಪ್ರಾಂತ್ಯಗಳನ್ನು ಆಳುತ್ತಿದ್ದುದ್ದು ಕಂಡುಬರುತ್ತದೆ. ಚೌಟರು, ಅಜಿಲರು, ಬಂಗರು, ಭೈರಸರು ಎಲ್ಲರೂ ಈ ಕಾಲದಲ್ಲಿದ್ದು, ಪ್ರದೇಶ ಮತ್ತು ಆಳ್ವಿಕೆ ಸಣ್ಣ ಸಣ್ಣ ಪ್ರಾಂತ್ಯಗಳಲ್ಲಿ ಹಂಚಿಹೋದ ಕಾರಣ ವ್ಯಾಪಾರ ಮತ್ತು ಕಲೆಗೆ ವಿಶೇಷವಾದ ಪ್ರೋತ್ಸಾಹ ಸಿಕ್ಕಿತು. ಹಾಗೆಯೇ ಜೈನಧರ್ಮಕ್ಕೂ ಈ ಕಾಲಘಟ್ಟದಲ್ಲಿ ವಿಶೇಷವಾದ ಪ್ರೋತ್ಸಾಹ ದೊರಕಿತು ಆ ಕಾರಣ ಜೈನಧರ್ಮ ಈ ಕಾಲಘಟ್ಟದಲ್ಲಿ ವಿಶೇಷವಾಗಿ ಬೆಳೆಯಿತು.ತುಂಡರಸರ ಆಳ್ವಿಕೆಯ ಮುಖ್ಯ ವಿಶಿಷ್ಟತೆಯೆಂದರೆ ಅವರು ಪರಧರ್ಮ ಸಹಿಷ್ಣುತೆಯ ಬೆಳೆಸಿದರು. ಸಾಹಿತ್ಯ ಕಲೆಗಳ ಆಶ್ರಯದಾತರಾದರು, ಈ ಕಾರಣದಿಂದಾಗಿಯೇ ಬೌದ್ಧ ಧರ್ಮ, ಜೈನ ಧರ್ಮ ಇವೆಲ್ಲ ಇಲ್ಲಿ ನೆಲೆಯೂರಲು ಸಾಧ್ಯವಾಯಿತು. ಚೌಟರ ಕಾಲದಲ್ಲಿ ಜೈನ ಧರ್ಮ ವಿಶೇಷವಾದ ಸ್ಥಾನಮಾನಗಳನ್ನು ಪಡೆಯಿತು. ಜೈನ ಬಸದಿಗಳ ಸ್ಥಾಪನೆಯೂ ಆಯಿತು. ರತ್ನಾಕರವರ್ಣಿಯಂತಹ ಮಹಾಕವಿ ಚೌಟರ ಆಶ್ರಯದಲ್ಲಿಯೇ ಬೆಳೆದರು. ಜೈನ ಧರ್ಮವೊಂದಷ್ಟೆ ಅಲ್ಲದೇ, ದಕ್ಷಿಣ ಕನ್ನಡ ಜಿಲ್ಲೆಯ ಬೇರೆ ಬೇರೆ ಕಡೆ ಬೇರೆ ಬೇರೆ ಧರ್ಮದವರ ನೆಲೆಗಳನ್ನು ಕಾಣಬಹುದಾಗಿದೆ.

ಸಾಮಾಜಿಕ ಬೆಳವಣಿಗೆಗಳು ದಕ್ಷಿಣ ಕನ್ನಡಕ್ಕೆ ಅನೇಕರು ವಲಸೆ ಬರುವ ಮೂಲಕ ಹೊಸ ಬೆಳವಣಿಗೆಗಳಾದದ್ದು ಸಾಮಾಜಿಕ ಬೆಳವಣಿಗೆಯ ಮುಖ್ಯ ಅಂಶವಾಗಿದೆ. ದಕ್ಷಿಣ ಕನ್ನಡದ ಕಡೆಗೆ ಬಂದ ವಲಸೆಗಳು ಈ ರೀತಿಯದ್ದು ಧರ್ಮದ ನೆಲೆಯಲ್ಲಿ, ಜಾತಿ ಪಂಗಡಗಳ ನೆಲೆಯಲ್ಲಿ, ಧಾರ್ಮಿಕ ಪ್ರಚಾರಕ್ಕೆ ಯೋಗ್ಯವಾದುದ್ದು, ವ್ಯಾಪಾರ ವಹಿವಾಟು , ಕೃಷಿಗೆ ಇದು ಯೋಗ್ಯ ಸ್ಥಳ, ಇವೆಲ್ಲದಕ್ಕಿಂತಲೂ ಈ ಜಿಲ್ಲೆ ಸುರಕ್ಷಿತವಾದ ತಾಣವೆಂಬ ನಂಬಿಕೆ. ವೈಯಕ್ತಿಕ ಅಭಿವೃದ್ಧಿಯ ಮೂಲಕ ಸಾಮಾಜಿಕವಾದ ಸ್ಥಾನಮಾನವನ್ನು ಕಂಡುಕೊಳ್ಳುವುದು ಮತ್ತು ಸಾಂಸ್ಕೃತಿಕ ಪುನರುತ್ಥಾನಕ್ಕೆ ಈ ಸ್ಥಳ ಯೋಗ್ಯ ಸ್ಥಳವಾದುದ್ದು ಎಂಬ ನಂಬಿಕೆ.

" ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದ ಮುಖ್ಯವಾದ ಸಾಮಾಜಿಕ ಬೆಳವಣಿಗೆಯೊಂದು ದಕ್ಷಿಣ ಕನ್ನಡದ ಜನರ ಬದುಕಿನಲ್ಲಿ ಮಹತ್ತರವಾದ ಪರಿವರ್ತನೆಗೆ ಕಾರಣವಾಗಿದೆ. ಜನರ ವಿಚಾರಶಕ್ತಿ, ಧೋರಣೆಯಲ್ಲೂ ಬದಲಾವಣೆಗೆ ಕಾರಣವಾಗಿ ಜನ ಹೊಸದಾಗಿ ಯೋಚಿಸುವಂತೆ ಮಾಡಿದೆ. ೧೮೬೧ ಕ್ಕಿಂತ ಪೂರ್ವದಲ್ಲಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗೆ ಸೇರಿದ ಕರಾವಳಿಯು ಕನ್ನಡ ಜಿಲ್ಲೆ ಎಂದು ಕರೆಯಲ್ಪಡುತ್ತಿತ್ತು. ಆದರೆ ಬ್ರಿಟಿಷರು ಆಡಳಿತದ ಸೌಲಭ್ಯಕ್ಕಾಗಿ ಇವೆರಡನ್ನೂ ಬೇರೆ ಬೇರೆ ಮಾಡಿ ಒಂದಕ್ಕೆ ಉತ್ತರ ಕನ್ನಡ ಎಂದು ಹೆಸರಿಟ್ಟು ಮುಂಬಯಿ ಪ್ರಾಂತ್ಯಕ್ಕೆ ಸೇರಿಸಿದರು. ಇನ್ನೊಂದಕ್ಕೆ ದಕ್ಷಿಣ ಕನ್ನಡ ಎಂದು ಹೆಸರಿಟ್ಟು ಮದ್ರಾಸು ಪ್ರಾಂತ್ಯಕ್ಕೆ ಸೇರಿಸಿದರು. ಇದರಿಂದಾಗಿ ಹೊಸ ಶಿಕ್ಷಣ ನೀತಿ, ಹೊಸ ವಿಚಾರಧಾರೆ ದಕ್ಷಿಣ ಕನ್ನಡದ ಕಡೆಗೆ ಹರಿದು ಬರುವಂತಾಯಿತು. ಮಂಗಳೂರಿಗೆ ಬಂದ ಬಾಸೆಲ್ ಮಿಶನ್ನವರು ಮಾಡಿದ ವಿಶೇಷ ಕೆಲಸಗಳಿಂದಾಗಿ ನಡೆದ ಕ್ಷಿಪ್ರ ಬೆಳವಣಿಗೆಗಳು ದಕ್ಷಿಣ ಕನ್ನಡದ ಜನರ ಸಾಮಾಜಿಕ ಬದುಕಿನಲ್ಲಿ ಪರಿವರ್ತನೆಯನ್ನು ತಂದಿತು. ಇವರು ಮಾಡಿದ ನೂತನ ಶಿಕ್ಷಣ ನೀತಿಯ ಪ್ರಯೋಜನವನ್ನು ಇಲ್ಲಿಯ ಜನರು ಪಡೆಯುವಂತಾಯಿತು. ಮಾತ್ರವಲ್ಲದೇ, ಬೇರೆ ರಾಜ್ಯದಲ್ಲಿನ ಬೆಳವಣಿಗೆಗಳು ತಿಳಿಯುವಂತಾಯಿತು "[೬]. ಹೊಸ ಶಿಕ್ಷಣ ಕ್ರಮದಿಂದಾಗಿ ಹೊಸ ವಿಚಾರಗಳನ್ನು ಬೆಳೆಸಿಕೊಂಡ ದಕ್ಷಿಣ ಕನ್ನಡದ ಸಾರಸ್ವತ ಬ್ರಾಹ್ಮಣರು ಕಾದಂಬರಿಗಳ ಮೂಲಕ ಅವುಗಳನ್ನು ಅಭಿವ್ಯಕ್ತಿಸಿದರು.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ, ದಕ್ಷಿಣ ಕನ್ನಡದ ಜನರ ಜೀವನ ಕ್ರಮ, ಪಾಶ್ಚಾತ್ಯ ಸಂಸ್ಕೃತಿಯ ಮೂಲಕ ಒದಗಿದ ಶಿಕ್ಷಣ, ಇವೆರಡೂ ಸಾಮಾಜಿಕ ನೆಲೆಗಳು ದಕ್ಷಿಣ ಕನ್ನಡ ಕವಿಗಳ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿದೆ. ದಕ್ಷಿಣ ಕನ್ನಡದ ಕವಿಗೆ ಶ್ರೇಣೀಕರಣಗೊಂಡ ಇಲ್ಲಿನ ಸಮಾಜದ ಬಗ್ಗೆ ಸ್ಪಷ್ಟವಾದ ಕಲ್ಪನೆಯೂ ಇದೆ. ಆದರೆ ಜನರು ಯಾವುದನ್ನೂ ಸಮಸ್ಯೆಯನ್ನಾಗಿ ತೆಗೆದುಕೊಳ್ಳದೇ ತಮ್ಮ ಪಾಡಿಗೆ ತಾವು ಬದುಕುತ್ತಿರುವ ರೀತಿಯ ಅರಿವು ಕೂಡಾ ದಕ್ಷಿಣ ಕನ್ನಡದ ಕವಿಗಿದೆ. ಬಹುಶಃ ದಕ್ಷಿಣ ಕನ್ನಡದ ಲೇಖಕರು ವಾಸ್ತವತಾವಾದಿಗಳೂ ಆಗಿರುವುದಕ್ಕೆ ಇದೇ ಕಾರಣ ಎನ್ನಬಹುದು. ಒಟ್ಟಿನಲ್ಲಿ ದಕ್ಷಿಣ ಕನ್ನಡದ ಕವಿಗಳು ವ್ಯಕ್ತಿವಾದಿಗಳಾಗಿದ್ದೂ, ಉದಾರವಾದಿಗಳಾಗುವುದಕ್ಕೆ ಇನ್ನೊಂದು ದೃಷ್ಟಿಯಿಂದ ವಾಸ್ತವತಾವಾದಿಗಳು ಆಗುವುದಕೆ ಇಲ್ಲಿನ ಬದುಕಿನ ರೀತಿ ಮತ್ತು ಬದಲಾಗುತ್ತಿರುವ ಬದುಕೇ ಕಾರಣ ಎನ್ನಬಹುದು.

ದಕ್ಷಿಣ ಕನ್ನಡದ ಜನರ ಮೇಲೆ ಇಲ್ಲಿನ ಸಾಂಸ್ಕೃತಿಕ ಪರಿಸರ ವಿಶಿಷ್ಟವಾದ ಪ್ರಭಾವವನ್ನು ಬೀರಿದೆ. ಹಾಗಾಗಿ ಸ್ವಾಭಾವಿಕವಾಗಿ ಕವಿಗಳ ಮೇಲೂ ಪ್ರಭಾವವನ್ನು ಬೀರಿದೆ. ಸಾಂಸ್ಕೃತಿಕ ಪರಿಸರವೆಂದರೆ ಇಲ್ಲಿ ತಲೆ ತಲಾಂತರದಿಂದ ರೂಢಿಯಲ್ಲಿರುವ ಆಚರಣೆಗಳು, ಸಾಂಸ್ಕೃತಿಕ ಕಲೆಗಳು ಸೇರಿಕೊಳ್ಳುತ್ತಾವೆ. ಭೂತಾರಾಧನೆ, ಯಕ್ಷಗಾನ, ನಾಗಾರಾಧನೆ, ಕಂಬಳ, ಕೋಳಿ ಅಂಕ ಮೊದಲಾದವು . ' ಯಕ್ಷಗಾನ ' ಕೇವಲ ಮೌಖಿಕ ಕಲೆಯಲ್ಲ. ಅದು ಪ್ರದರ್ಶನ ಕಲೆ ಅದಕ್ಕೊಂದು ಪಠ್ಯವೂ ಇರುತ್ತದೆ. ಜನರ ಮೇಲೆ ಯಕ್ಷಗಾನದ ಸ್ವರೂಪದ ಪ್ರಭಾವ ವಿಶೇಷವಾಗಿ ಆಗಿದ್ದರೆ ದಕ್ಷಿಣ ಕನ್ನಡದ ಕವಿಗಳ ಮೇಲೆ ಯಕ್ಷಗಾನದ ಪ್ರಭಾವ ಮತ್ತು ಅದರ ಪಠ್ಯದ ಪ್ರಭಾವಗಳು ಆಗಿವೆ [೪].

ಮುಖ್ಯವಾಗಿ ಎರಡು ಸಾಹಿತ್ಯಕ ಅಂಶಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೊಸಗನ್ನಡ ಸಾಹಿತ್ಯಚಟುವಟಿಕೆಗಳು ಹುಟ್ಟಿ ಬೆಳೆಯುವುದರಲ್ಲಿ ಪ್ರಮುಖ ಪಾತ್ರವಹಿಸಿದೆ. ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ನಡೆದ. ಈ ಅಂಶಗಳೇ ದಕ್ಷಿಣ ಕನ್ನಡದಲ್ಲಿ ೨೦ ನೆಯ ಶತಮಾನದಲ್ಲಿ ಸಾಹಿತ್ಯ ಬರವಣಿಗೆಯ ಕಾರ್ಯ ತೀವ್ರಗತಿಯಲ್ಲಿ ಬೆಳೆಯುವುದಕ್ಕೆ ಕಾರಣವಾಗಿದೆ. ಈ ಎರಡು ಅಂಶಗಳು. ೧. ಮುದ್ರಣ ಯಂತ್ರಗಳ ಸ್ಥಾಪನೆ. ೨. ಪತ್ರಿಕೆಗಳು.

**2.3.0 - ಮಹಿಳಾ ಸಾಹಿತ್ಯ :-** ಕನ್ನಡ ಸಾಹಿತ್ಯಕ್ಕೆ ಸಾವಿರ ವರ್ಷಗಳ ಇತಿಹಾಸವಿದೆ. ಅದು ನಿಂತ ನೀರಾಗದೆ, ಸಮೃದ್ಧವಾಗಿ ವೈವಿಧ್ಯ ಪೂರ್ಣವೂ ಆಗಿದೆಯಲ್ಲದೆ ಮಿತಿಗಳನ್ನು ದಾಟಿಯೂ ಬೆಳೆದಿದೆ. ಈ ಪರಿವರ್ತನೆಯಲ್ಲಿ ಅನೇಕ ಸಾಹಿತಿಗಳ ಸತತ ಪರಿಶ್ರಮವೂ ಇರುವುದು. ಕನ್ನಡ ಸಾಹಿತ್ಯ ಪರಂಪರೆ ಸಮೃದ್ಧವಾಗಿ ಬೆಳೆಯುವಲ್ಲಿ ಲೇಖಕಿಯರ ಕೊಡುಗೆ ಮಹತ್ವದ್ದಾಗಿದೆ, ಸಾಹಿತ್ಯದ ವಿವಿಧ ಪ್ರಕಾರಗಳಾದ ಕತೆ, ಕಾದಂಬರಿ, ನಾಟಕ, ಕಾವ್ಯ, ಜೀವನ ಚರಿತ್ರೆಯಿಂದ ಹೊಸಗನ್ನಡ ಸಾಹಿತ್ಯ ವರ್ಗೀಕೃತಗೊಂಡಿರುವುದನ್ನು ಕಾಣುತ್ತೇವೆ.

ಮಹಿಳಾ ಸಾಹಿತ್ಯವನ್ನು ಪ್ರಮುಖವಾಗಿ ಎರಡು ಹಂತಗಳಲ್ಲಿ ಅಧ್ಯಯನ ಮಾಡಬಹುದು. ಮೊದಲನೆಯ ಹಂತವನ್ನು ಪ್ರಾಚೀನ ಮಹಿಳಾ ಸಾಹಿತ್ಯವೆಂದೂ ಎರಡನೆಯ ಹಂತವನ್ನು ಆಧುನಿಕ ಮಹಿಳಾ ಸಾಹಿತ್ಯವೆಂದು ಸ್ಥೂಲವಾಗಿ ವಿಂಗಡಿಸಿದ್ದಾರೆ, ಈ ಎರಡೂ ಹಂತಗಳನ್ನು ಮೂರು ಒಳ ವಿಭಾಗ ಮಾಡಿಕೊಂಡು ಒಟ್ಟು ಮಹಿಳಾ ಸಾಹಿತ್ಯದ ನೆಲೆ ಬೆಲೆಯನ್ನು ತಿಳಿಯಬಹುದು ಎಂದು ಕಮಲಾ ಹಂಪನಾ ಅವರು ಈ ಹಂತಗಳನ್ನು ಕೆಳಕಂಡಂತೆ ಗುರುತಿಸಿದ್ದಾರೆ.|

" ಭಾಗ ಒಂದರಲ್ಲಿನ ಮೂರು ವಿಭಾಗಗಳು :-

ಅ. ಕನ್ನಡತಿಯರಾಗಿ ಸಂಸ್ಕೃತದಲ್ಲಿ ಸಾಹಿತ್ಯ ರಚಿಸಿದವರು

ಆ. ಕಂತಿ, ಅಕ್ಕ ಮಹಾದೇವಿ, ಜಕ್ಕಲಾಂಬಾ (ಶ್ರೀಮತಿ) , ನಾಗಲಿದೇವಿ

ಇ. ಮೈಸೂರು ಒಡೆಯರ ಕಾಲದ ಲೇಖಕಿಯರು

ಭಾಗ ಎರಡರಲ್ಲಿನ ಮೂರು ವಿಭಾಗಗಳು :-

ಅ. ೧೯೦೦ ರಿಂದ ೧೯೫೦ರ ವರೆಗಿನ ಮಹಿಳಾ ಸಾಹಿತ್ಯ - ಸಮಾಧಾನಕರ ಸಾಹಿತ್ಯಾ

ಆ. ೧೯೫೦ ರಿಂದ ೧೯೭೫ ರ ವರೆಗಿನ ಸಾಹಿತ್ಯ - ಸಂಭ್ರಮದ ಸಾಹಿತ್ಯ

ಇ. ೧೯೭೫ ರಿಂದ ೨೦೦೦ದ ವರೆಗಿನ ಸಾಹಿತ್ಯ - ಸಂಕೀರ್ಣ ಸಾಹಿತ್ಯ

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಇಪ್ಪತ್ತನೆಯ ಶತಮಾನದವರೆಗೂ ನೋಡಿದರೆ ಮಹಿಳಾ ಸಾಹಿತಿ ಅಲ್ಲೊಮ್ಮೆ ಇಲ್ಲೊಮ್ಮೆ ಮಿಂಚಿ ಮಾಯಾವಾಗಿದ್ದಾಳೆ. ತನಗಿದ್ದ ಪ್ರತಿಕೂಲ ಪರಿಸ್ಥಿತಿಯಲ್ಲೂ ಪುರುಷರಂತೆ ಮಹಿಳೆಯರೂ ಸಾಹಿತ್ಯ ರಚನೆಯಲ್ಲಿ ಪಾಲುಗೊಂಡಿದ್ದಾರೆ. ಸಹಜವಾಗಿಯೇ ಇವರ ಸಂಖ್ಯೆ ಹೆಚ್ಚಿಲ್ಲ. ಸಂಖ್ಯೆ ಕಡಿಮೆ ಎಂದು ಆಕೆಯ ಸಾಹಿತ್ಯ ಪ್ರತಿಭೆಯನ್ನು ಕಡೆಗಣಿಸಬೇಕಾಗಿಲ್ಲ "[೫] .

ಹೊಸಗನ್ನಡ ಸಾಹಿತ್ಯದ ಆರಂಭದ ಕಾಲಘಟ್ಟ ೧೯೦೦ - ೧೯೫೦ ಸಮಾಧಾನಕರ ಸಾಹಿತ್ಯ ರಚನೆಯನ್ನು ಕಾಣಬಹುದು. ಇಪ್ಪತ್ತನೆಯ ಶತಮಾನದ ಮೊದಲಲ್ಲಿ ಸಾಹಿತ್ಯ ರಚನೆ ಮಾಡಿ ಆಧುನಿಕ ಗನ್ನಡ ಸಾಹಿತ್ಯಕ್ಕೆ ನಾಂದಿ ಹಾಡಿದವರು ನಂಜನಗೂಡಿನ ತಿರುಮಲಾಂಬರವರು ಸಣ್ಣ ಪ್ರಾಯದಲ್ಲಿ ವಿಧವೆಯಾದ ಇವರು ಪ್ರಥಮ ಪತ್ರಕರ್ತೆ ಹಾಗೂ ಪ್ರಕಾಶಕಿ, ಸಾಹಿತಿಯಾಗಿ, ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಕೃತಿ ರಚಿಸಿದ್ದಾರೆ. ಆರ್. ಕಲ್ಯಾಣಮ್ಮನವರು ಇದೇ ಕಾಲಘಟ್ಟದಲ್ಲಿ ಕೃತಿ ರಚಿಸಿರುವುದನ್ನು ಕಾಣುತ್ತೇವೆ. ಬಾಲ್ಯ ವಿವಾಹದ, ಹೆಣ್ಣಿಗೆ ವಿದ್ಯಾಭ್ಯಾಸ, ಹೆಣ್ಣಿನ ಶೋಷಣೆಯ ಕಾಳಜಿ ಇವರಿಬ್ಬರ ಸಾಹಿತ್ಯದಲ್ಲಿ ಗೋಚರಿಸುತ್ತದೆ. ತಿರುಮಲೆ ರಾಜಮ್ಮ ಇವರು ಅನೇಕ ಕೃತಿಗಳನ್ನು ಈ ಕಾಲಘಟ್ಟದಲ್ಲಿ ರಚಿಸಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ನೆಲ್ಲಿಕಾರು ರಾಧಮ್ಮ ಸಾಂಗತ್ಯ ಛಂದಸ್ಸಿನಲ್ಲಿ ಮಹಾಕಾವ್ಯವನ್ನು ಈ ಕಾಲಘಟ್ಟದಲ್ಲಿ ರಚಿಸಿದ್ದಾರೆ .

ಎರಡನೆಯ ಅವಧಿ ೧೯೫೦ - ೭೫ರಲ್ಲಿ ಮೂಡಿ ಬಂದ ಮಹಿಳಾ ಸಾಹಿತ್ಯವನ್ನು 'ಸಂಭ್ರಮದ ಸಾಹಿತ್ಯ' ಎಂದಿದ್ದಾರೆ. |" ಈ ಕಾಲಘಟ್ಟದಲ್ಲಿ ಸಾಹಿತ್ಯದ ವಿವಿಧ ಪ್ರಕಾರಗಳು ಸುರಿ ಮಳೆಯಂತೆ ಅಧಿಕ ಸಂಖ್ಯೆಯಲ್ಲಿ ಸೃಷ್ಟಿಗೊಂಡಿರುವುದು ವಿಶೇಷವೆನಿಸುವುದು. ಈ ಕಾಲದಲ್ಲಿ ಬರವಣಿಗೆ ಕ್ರಿಯಾಶೀಲವಾಗಿದೆ. ಅವಕಾಶಗಳ ಸಮೃದ್ಧತೆಯಿದ್ದ ಈ ಅವಧಿಯಲ್ಲಿ ಮಧ್ಯಮ ವರ್ಗದ ವಿದ್ಯಾವಂತ ಮಹಿಳೆಯರು ಬರವಣಿಗೆ ಮಾಡಿದರು. ಚಿ. ಸುನಂದಮ್ಮ , ಕಡಿದಾಳ್ ಮಂಜಪ್ಪ, ಎಚ್. ವಿ. ಸಾವಿತ್ರಮ್ಮ - ಇವರ ಬರಹಗಳ ಮಾದರಿಗಿಂತ ಭಿನ್ನವಾಗಿ ಬರೆಯ ತೊಡಗಿದ |ತ್ರಿವೇಣಿ ' ಕಾವ್ಯನಾಮದ ಅನಯೂಯ ಶಂಕರ್ ಕಥನ ಪ್ರಕಾರಕ್ಕೆ ಬೋಧಿಸಿದ ಡಾ. ಅನುಪಮಾ ನಿರಂಜನ ಮಹಿಳಾ ಸಾಹಿತ್ಯಕ್ಕೆ ಹೊಸದಿಕ್ಕು ತೋರಿದರು. ವಾಣಿ, ಎಂ.ಕೆ.ಇಂದಿರಾ, ಹೀಗೆ ಪಟ್ಟಿ ಬೆಳೆಯಿತು. ಸಂಭ್ರಮೋತ್ಸಾಹ ಭರಿತ ಈ ಕಾಲದ ಸಾಹಿತ್ಯ ಓದುಗರ ಬಳಗವನ್ನು ಬೆಳೆಸಿತು "[೬].

೧೯೭೫ರ ಅನಂತರದ ಮಹಿಳಾ ಸಾಹಿತ್ಯವನ್ನು ಸಂಭ್ರಮದ ಸಾಹಿತ್ಯ ಎಂದಿದ್ದಾರೆ. " ಈ ವರ್ಷವನ್ನು ಅಂತರ್ ರಾಷ್ಟ್ರೀಯ ಮಹಿಳಾ ವರ್ಷ ಎಂದು ಆಚರಿಸಲ್ಪಟ್ಟಿತು. ಈ ಹೊತ್ತಿನಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ದಲಿತ ಬಂಡಾಯ ಮತ್ತು ಸ್ತ್ರೀವಾದಿ ಚಳುವಳಿಗಳು ತೀವ್ರ ಪರವಾಗಿ ಕಾಣಿಸಿಕೊಂಡಿತು. ಸಾಹಿತ್ಯ ಕ್ಷೇತ್ರದಲ್ಲಿ ಇವರ ಸಂಘರ್ಷವು ಆರಂಭಗೊಂಡು, ಲೇಖಕಿಯರು ವಾಗ್ವಾದಗಳಿಂದ ಪ್ರಭಾವಿತಗೊಂಡು ಮೌಲಿಕವಾದ ಕೃತಿಗಳು ಪ್ರಕಟವಾದವು.

ವೀಣಾ ಶಾಂತೇಶ್ವರ, ಕಮಲಾ ಹಂಪನಾ, ಬಿ.ಟಿ ಲಲಿತಾ ನಾಯಕ್, ಸುಕನ್ಯಾ ಮಾರುತಿ ಮಲ್ಲಿಕಾ ಘಂಟಿ ಮೊದಲಾದ ಲೇಖಕಿಯರು ಪ್ರಧಾನವಾಗಿ ಬಂಡಾಯ ಮತ್ತು ದಲಿತ ಮನೋಧರ್ಮಕ್ಕೆ ಸ್ಪಂದಿಸಿದ್ದಾರೆ. ಇದೇ ಧೋರಣೆಯೊಂದಿಗೆ ಮುಸ್ಲಿಂ ಸಂವೇದನೆಯನ್ನೂ ಕಲಾತ್ಮಕವಾಗಿ ಹಾಗೂ ಬಲಶಾಲಿಯಾಗಿ ಪ್ರತಿನಿಧಿಸುವ ಬರವಣಿಗೆ ಮಾಡಿದವರು ಸಾರಾ ಅಬೂಬಕ್ಕರ್ ಮತ್ತು ಬಾನು ಮುಷ್ತಾಕ್ ಸಾಮಾಜಿಕ ಪ್ರಸ್ತುತತೆಯ ಬೀದಿ ನಾಟಕ ಪ್ರಕಾರವನ್ನೂ ಬೆಳೆಸಿ, ಜನಪ್ರಿಯಗೊಳಿಸಿ ಇಳಾ ವಿಜಯ ಮಾಡಿದ ಪ್ರಯೋಗ ವಿಶಿಷ್ಟವಾದುದುದು. ಓದಿನೊಂದಿಗೆ ಕ್ಷೇತ್ರ ಕಾರ್ಯದ ಶ್ರಮವನ್ನು ಬಯಸುವ ಸಂಶೋಧನ ಕ್ಷೇತ್ರದಲ್ಲೂ ಮಹಿಳೇಯರು ಮುಂದಿದ್ದಾರೆ. ಕಮಲಾ ಹಂಪನಾ, ಚೆನ್ನಕ್ಕ ಪಾವಟೆ, ಹನು ಮಾಕ್ಷಿಗೋಗಿ ಮುಂತಾದವರನ್ನೂ ಹೆಸರಿಸಬಹುದು. ಸ್ತ್ರೀ ವಾದಿ ನೆಲೆಯ ಚಿಂತನೆಯನ್ನು ಅನುಸರಿಸುವ ವಿಮರ್ಶೆ ಹಾಗೂ ಕೃತಿ ರಚನೆಯಲ್ಲಿ ವಿಜಯಾದಬ್ಬೆ, ತೇಜಸ್ವಿ ನಿರಂಜನ, ಸುಮಿತ್ರಾ ಬಾಯಿ ವಿಜಯಾ ಸುಬ್ಬರಾವ್, ಎಚ್. ವಿ. ಪ್ರಭಾವತಿ ಹೆಸರಾಗಿದ್ದಾರೆ. ನೇಮಿಚಂದ್ರ, ವೈದೇಹಿ, ಸಿ.ಎನ್. ಮುಕ್ತಾ ಮುಂತಾದವರು ಕನ್ನಡ ಭಾಷೆಯನ್ನು ದುಡಿಸಿಕೊಂಡಿರುವ ರೀತಿ ಗಮನ ಸೆಳೆಯುತ್ತದೆ. ನಿರ್ದಿಷ್ಟ ಸಾಹಿತ್ಯ ಕ್ಷೇತ್ರಕ್ಕೆ ಸೀಮಿತರಾಗದೆ ವಿವಿಧ ಪ್ರಕಾರದಲ್ಲಿ ಉತ್ತಮ ಕೃತಿಗಳನ್ನು ರಚಿಸಿರುವ ಲೇಖಕಿಯರು ಹಲವರು "[2].

೧೯೮೫ರ ನಂತರ ಮಹಿಳಾ ಸಾಹಿತ್ಯಗಳು ಸೃಜನಶೀಲತೆಯಿಂದ ಸಾಹಿತ್ಯ ಕ್ಷೇತ್ರಕ್ಕಾಗಿ ದುಡಿದಿದ್ದಾರೆ. ಅಲ್ಲಿಂದ ಈಚೆಗಿನ ದಶಕಗಳಲ್ಲಿ ಕವಯತ್ರಿಯರು ಕಾವ್ಯಕ್ಷೇತ್ರವನ್ನು ಸಮೃದ್ಧವಾಗಿ ಬೆಳೆಸಿದ್ದಾರೆ. ವೈವಿಧ್ಯಮಯ ವಸ್ತು, ಹೆಣ್ಣಿನ ವಿವಿಧ ಅನುಭವಗಲು ಹಾಗೂ ಸ್ಪಂದನೆಗಳು ನಿರ್ಬಿಡೆಯ ಅಭಿ ವ್ಯಕ್ತಿ, ಮುಕ್ತಲಯ ವಿನ್ಯಾಸ, ಭಾಷೆಯ ಸೊಗಡು, ಉಪಮೆ - ರೂಪಕಗಳ ಬಳಕೆ, ರಚನಾ ಶಕ್ತಿ ಇವುಗಳಿಂದ ಕೂಡಿದ ಹಲವು ಕವನ ಸಂಕಲನ ಗಳು ಹೊರಬಂದಿದೆ ಕನ್ನಡ ಕವಯತ್ರಿಯರ ಸಾಧನೆ ಅಭಿಮಾನ ಮತ್ತು ಹೆಮ್ಮೆಯನ್ನು ಮೂಡಿಸುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಆದ್ಯ ಕವಿ ಪರಂಪರೆ ಆರಂಭವಾದುದೇ ಪಂಪ ರನ್ನರೇ ಮೊದಲಾದ ಜೈನ ಕವಿಗಳಿಂದ ಕಂತಿ ಎಂಬ ಜೈನ ಕವಯತ್ರಿಯನ್ನು ಬಿಟ್ಟರೆ ನಮಗೆ ಕಂಡು ಬರುವ ಮತ್ತೊಂದು ಹೆಸರು ಹೊನ್ನಮ್ಮ ದಕ್ಷಿಣ ಕನ್ನಡದಲ್ಲಿ ಜೈನ ಕವಿ ರತ್ನಾಕರ ವರ್ಣಿಯಿಂದ ಮೊದಲು ಸೋಮರಾಜ, ಸಾಳ್ವಕವಿ, ಕಲ್ಯಾಣಕೀರ್ತಿ, ಚಂದ್ರಮ್ಮ, ಕೋಟೀಶ್ವರ ಮೊದಲಾದ ಕವಿಗಳು ದಕ್ಷಿಣ ಕನ್ನಡದವರೆಂದು ತಿಳಿದು ಬರುತ್ತದೆ, ಓಗೆ ತೊಡಗಿದ ಸಾಹಿತ್ಯ ಪರಂಪರೆಯಲ್ಲಿ ಎರಡು ಮೂರು ಶತಮಾನಗಳವರೆಗೆ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದ ಮಹಿಳೆಯರೇ ಇರಲಿಲ್ಲವೆಂದು ಕಾಣುತ್ತದೆ. ಆದರೆ ಸುಮಾರು ೧೯ನೆಯ ಶತಮಾನದ ವರೆಗೆ ಯಾವುದೇ ಮಹಿಳೆ ಪ್ರಕಟವಾಗಿ ಸಾಹಿತ್ಯ ಪ್ರವೃತ್ತಿ ತೋರಿಸದಿದ್ದರೂ ಗೃಹಲಕ್ಷ್ಮಿಯಾಗಿ ಸಾಹಿತ್ಯ ಧಾರ್ಮಿಕ ಗ್ರಂಥ ಪಠಣ, ಅನುಭವಾಮೃತಗಳಂಥ ನೀತಿ ಬೋಧಕ ಕೃತಿಗಳ ಅಭ್ಯಾಸ ಮಾಡುತ್ತ, ಶೋಭಾನೆ, ದೇವಸ್ತುತಿ ಮೊದಲಾದುವನ್ನು ರಚಿಸುತ್ತ ಬಂದು ಸುಸಂಸ್ಕೃತ ವಾತಾವರಣ ಸೃಷ್ಟಿಸಿದ್ದುದಿದೆ.

ಎಲ್ಲ ಸಾಹಿತ್ಯಕ್ಕೂ ಮೂಲ ಬೇರು ಜನಪದ ಸಾಹಿತ್ಯ ಅಂತೆಯೇ ಕನ್ನಡ ಸಾಹಿತ್ಯದಲ್ಲಿಯೂ ಅನೇಕ ವೈವಿಧ್ಯ ಹಾಗೂ ವಿಶಿಷ್ಟತೆಯಿಂದ ಕೂಡಿರುವ ಜನಪದ ಸಾಹಿತ್ಯದ ಅಪಾರ ಕೊಡುಗೆಯನ್ನು ಕಾಣಬಹುದಾಗಿದೆ. ಅನೇಕ ಧರ್ಮದ ಜನರು ತಮ್ಮ ಮತಗಳ ಬುಡ ಕಟ್ಟುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸಾಹಿತ್ಯವನ್ನು ರಚಿಸಿದ್ದಾರೆ. ಅವರವರ ಕೈಂಕರ್ಯಕ್ಕೆ ಸೇರಿದ ಸಂಬಂಧಪಟ್ಟ ಆಚಾರ ವಿಚಾರ ಕುರಿತು, ಪೂಜೆ ಪುರಸ್ಕಾರಗಳ ಬಗ್ಗೆ ತಮ್ಮ ನಡೆ ನುಡಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ವಿವಿಧ ಭಾವನೆಗಳಿಂದ ಸಾಹಿತ್ಯ ರಚನೆಯನ್ನು ಮಾಡಿರುವುದು ಕಾಣಬಹುದಾಗಿದೆ.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕೈ ಬೆರಳಿನ ಎಣಿಕೆಗೂ ಪೂರ್ತಿಯಾಗಿ ದೊರೆಯದಂತಿರುವ ಪ್ರಾಚೀನ ಕವಯತ್ರಿಗಳ ಬಗೆಗೆ ಯೋಚಿಸಿದರೆ ಮೂಡುವ ಭಾವನೆಗಳು ನೋವಿನದಾಗಿದ್ದರೂ ಮಿಂಚಿಹೋದ ಕಾಲಕ್ಕೆ ಮರುಗುತ್ತಾ ಕೂರುವುದರಲ್ಲಿ ಅರ್ಥವಿಲ್ಲ. ಪುರುಷ ಪ್ರಧಾನ ವ್ಯವಸ್ಥೆಯೊಳಗಿನ ಮನೋ ಧರ್ಮವೇ ಇದಕ್ಕೆ ಕಾರಣವಾಗಿರಬಹುದು ಎಂದು ವಿಮರ್ಶೆಗಳಿಂದ ತಿಳಿದುಕೊಳ್ಳಬಹುದು.

ಪ್ರಾಚೀನ ಮಹಿಳಾ ಸಾಹಿತ್ಯಕ್ಕೆ ಕನ್ನಡಿಗರ ಬದುಕು, ಬರಹ ಮತ್ತು ಸೃಜನಶೀಲತೆಯ ಸ್ವರೂಪವನ್ನು ಪ್ರೇರೇಪಿಸಿದ ರಾಜಕೀಯ ಧಾರ್ಮಿಕ ಸಾಮಾಜಿಕ ಮತ್ತು ಸಾಂಸ್ಕೃತಿಕ ನೋಟವು ಬಹಳ ನಿಚ್ಚಳವಾಗಿದೆ[೭]. ಭಾರತೀಯ ಚಿಂತನೆಗಳನ್ನು ಮತ್ತು ಸಮಾಜ ವ್ಯವಸ್ಥೆಯನ್ನು ಆಳವಾಗಿ ಪ್ರಭಾವಿಸದ ಲಿಂಗಬೇಧದ ಗ್ರಹಿಕೆಗಳು ಮತ್ತು ವಿರಕ್ತ ಧರ್ಮ ದರ್ಶನಗಳು ಗಟ್ಟಿಗೊಳಿಸಿದ ಸ್ತ್ರೀ ವಿರೋಧಿ ನಂಬಿಕೆಗಳ ಕಾರಣವಾಗಿ ಇತಿಹಾಸದುದ್ದಕ್ಕೂ ಭಾರತೀಯ ಮಹಿಳೆ ಪ್ರಾಪಂಚಿಕ ಮತ್ತು ಪಾರಮಾರ್ಥಿಕ ನೆಲೆಗಳಲ್ಲಿ ತಿರಸ್ಕಾರ ಮತ್ತು ಅವಹೇಳನಕ್ಕೆ ಗುರಿಯಾಗುತ್ತಾ ಬಂದಿದ್ದಾರೆ. ಆದರೆ ಕಾಲಕಾಲಕ್ಕೆ ಉದಿಸಿದ ಭಾರತೀಯ ಧರ್ಮದರ್ಶನಗಳು ಸ್ತ್ರೀ ಸಮುದಾಯದ ಸಂಕಷ್ಟಗಳಿಗೆ ಸ್ಪಂದಿಸುತ್ತ ಬಂದಿದೆ. ಯಜಮಾನ ಸಂಸ್ಕೃತಿಯ ಶಕ್ತಿ ರಾಜಕಾರಣದಿಂದಾಗಿ ಸಹಜ ಬದುಕಿನ ಅವಕಾಶಗಳಿಂದ ವಂಚಿತರಾದ ಬಹು ಸಂಖ್ಯಾತ ಜನವರ್ಗದಲ್ಲಿ ಅರಿವು, ಆತ್ಮ ಪ್ರಜ್ಞೆ ಮೂಡಿಸುವ ಪ್ರಯತ್ನದಲ್ಲಿ ಬೌದ್ಧ, ಜೈನ ಧರ್ಮಗಳ, ಶೈವ ವೈಷ್ಣವ ಇತ್ಯಾದಿ ಭಕ್ತಿ ಪಂಥಗಳ ಕೊಡುಗೆ ಹಿರಿದಾಗಿದೆ. ಮಾನವತಾವಾದಿಗಳಾದ ಧಾರ್ಮಿಕ ನಾಯಕರ ಉದಾರವಾದಿ ಧೋರಣೆಗಳು ಮಹಿಳೆಯರ ಸಾಮಾಜಿಕ ಸ್ಥಿತಿಗತಿಗಳ ಸುಧಾರಣೆಗೆ ಕೆಲಮಟ್ಟಿಗೆ ನೆರವಾಗಿದೆ.

" ಧರ್ಮಶಾಸ್ತ್ರಗಳ ಕಟ್ಟಳೆಗಳಲ್ಲಿ ಕೌಂಟುಬಿಕ ದಾಸ್ಯ, ಸಾಮಾಜಿಕ ಉಪೇಕ್ಷೆ ಮತ್ತು ಧಾರ್ಮಿಕ ಅಸ್ಪೃಶ್ಯತೆ ಅಜ್ಞಾನ ಅಧೀನತೆಯಲ್ಲಿ ಮುಳುಗಿಹೋಗಿದ್ದ ಸ್ತ್ರೀ ಸಮಾಜದ ಕಲ್ಯಾಣಕ್ಕಾಗಿ ವೇದೋಪನಿಷತ್ತುಗಳು ದೃಷ್ಟಾರರು, ಬುದ್ಧ, ಮಹಾವೀರರೂ, ಚಿಂತಿಸಿದ್ದಾರೆ. ಮಹಿಳೆಯರ ಧಾರ್ಮಿಕಾಸಕ್ತಿಯನ್ನು, ಆತ್ಮಜ್ಞಾನದ ಅದಿಕಾರವನ್ನು, ಶಿಕ್ಷಣ ವೇದಾಧ್ಯಯನದ ಅವಕಾಶಗಳನ್ನು ಮುಕ್ತಗೊಳಿಸಿದ ವೇದ ಯುಗದ ಮಾನವೀಯ ಕಾಳಜಿಯು, ಗಾರ್ಗಿ, ಮೈತ್ರೇಯ, ಆದಿತಿ, ಇಂದ್ರಾಣಿ, ವಾಚಕ್ನವಿ, ಅಪಲಾ, ಲೋಪ ಮುದ್ರಾ, ವೈವಸ್ವತಿ ಇತ್ಯಾದಿ ಬ್ರಹ್ಮ ವಾದಿನಿಯರ ಹುಟ್ಟಿಗೆ ಕಾರಣವಾಗಿದೆ. ವೈದಿಕ ಚಿಂತನಾಕ್ರಮದ ಪುರುಷ ಪರನೀತಿಯಿಂದಾಗಿ ಮೋಕ್ಷಾಧಿಕಾರಕ್ಕೆ ಅನರ್ಹಳಾಗಿ, ಶೂದ್ರ ನೆಲೆಗೆ ಸಂದಿದ್ದ ಮಹಿಳೆಯರಿಗೆ ಧರ್ಮಸಾಧನೆಯನ್ನು ಪುರಸ್ಕರಿಸಿದ ಜೈನ, ಬೌದ್ಧ ಧರ್ಮಗಳು ಮಹಿಳೆಯರ ಲೌಕಿಕ ಪಾರಲೌಕಿಕ ಸಮಸ್ಯೆಗಳನ್ನು ಕೆಲಮಟ್ಟಿಗೆ ಹಗುರಗೊಳಿಸಿ ಸ್ತ್ರೀ ವಿರೋಧಿಯಾಗಿದ್ದ ಸಾಮಾಜಿಕ ವಾಸ್ತವತೆಯಲ್ಲಿ ಜೀವಪರಕತೆಯ ಹೊಸಬೆಳಕು ಮೂಡಿಸಿದವು "[೮].

ಕಾಲಾನಂತರ ಪರಕೀಯ ಆಕ್ರಮಣಗಳ ಫಲವಾಗಿ, ರಾಜಕೀಯ ಧಾರ್ಮಿಕ ಸ್ಥಿತ್ಯಂತರಗಳು ಮತ್ತು ಮತ ಧರ್ಮಗಳ ಪೈಪೋಟಿಯಲ್ಲಿ ಮಹಿಳೆಯರ ಬದುಕು ಹೊಸ ಹೊಸ ನಿಬಂಧಗಳಿಗೆ ಗುರಿಯಾಯಿತು." ರಕ್ಷಣೆಯ ನೆಪದಲ್ಲಿ ದಾಸ್ಯದ ಉರುಲು ಬಿಗಿಯಾಗಿ, ಕೌಟುಂಬಿಕ ಮೌಲ್ಯಾದರ್ಶಗಳ ಹೊರೆ, ನೀತಿ ನಿಯಮಗಳ ಭಾರ ಹಿರಿದಾಗುತ್ತಾ, ಪುರುಷಾಧಿನತೆಯೇ ಶ್ರೇಷ್ಠ ಮೌಲ್ಯಗಳು ಮರೆಯಾಗಿ ಸ್ತ್ರೀಯರ ಧಾರ್ಮಿಕ ಸಾಮಾಜಿಕ ಸಹಭಾಗಿತ್ವ ನಿಷೇದಕ್ಕೊಳಗಾಯಿತು "[೯]. ಹೆಣ್ಣು ದುಃಖದಾಯಿನಿ ಎನ್ನುವ ತಿರಸ್ಕಾರಕ್ಕೆ ಗುರಿಯಾಗಿ ಸೇವೆ, ಸಂತಾನೋತ್ಪತ್ತಿಯ ಸಾಧನ ಮಾತ್ರವಾಗುಳಿದಿದ್ದ ಸಂದರ್ಭದಲ್ಲಿ ಕಾಣಿಸಿಕೊಂಡ ಶೈವ ಮತ್ತು ವೈಷ್ಣವ ಭಕ್ತಿ ಪಂಥಗಳ ಜೀವಪರಾಶಯಗಳು ಮಹಿಳೆಯರನ್ನು ಸುತ್ತುವರೆದಿದ್ದ ಸಾಮಾಜಿಕ, ಧಾರ್ಮಿಕ ದಿಗ್ಬಂದನಗಳನ್ನು ಕೆಲಮಟ್ಟಿಗೆ ಸಡಿಲಗೊಳಿಸಿದವು. ಕಾರಿಕಾಲಮ್ಮ ಅಂಡಾಳ್ ಆಧ್ಯಾತ್ಮ ಸಾಧಕಿಯರಾಗಿ ಸ್ತ್ರೀ ಚೈತನ್ಯದ ನೆಲೆಯನ್ನು ವಿಸ್ತರಿಸಿದರು. ವಿವಾಹವೇ ಮೋಕ್ಷ ಮಾರ್ಗವಾಗಿ, ಪತಿಯೇ ಪರದೈವವಾಗಿ, ಸ್ತ್ರೀ ವ್ಯಕ್ತಿತ್ವದ ಉಳಿದೆಲ್ಲ ಸಾಧ್ಯತೆಗಳು ನಿಷೇಧಗೊಂಡ ವಿಷಮ ಸಂದರ್ಭಗಳಲ್ಲಿ ಧಾರ್ಮಿಕ ಕೇಂದ್ರದಿಂದ ನಡೆದ ಸ್ತ್ರೀ ಉದ್ಧಾರದ ಕೆಲವು ಚಾರಿತ್ರಿಕ ಪ್ರಯತ್ನಗಳು ಪುರುಷ ಪ್ರಾಧಾನ್ಯದ ಗಟ್ಟಿಬೇರುಗಳನ್ನು ಕೆಲಮಟ್ಟಿಗೆ ಅಲುಗಾಡಿಸಿದ್ದರೂ, ಆಳವಾಗಿ ಬೇರೂರದೇ ಹೋದದ್ದು ಸ್ತ್ರೀ ವಿಮೋಚನೆಯ ದುರಂತ ಚರಿತ್ರೆ.

" ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯ ಕಾಣಾ ಗುಹೇಶ್ವರಾ "[೧೦] .

ಸ್ತ್ರೀ ತ್ವಕ್ಕಂಟಿದ 'ಮಾಯ' 'ಮಿಥ್ಯೆ' ಯೆಂಬ ಹುಸಿ ನಂಬಿಕೆಗಳನ್ನು ನಿರಾಕರಿಸಿದುದು ಶರಣರ ಸ್ತ್ರೀ ಪರ ಚಿಂತನೆಯ ಮಹತ್ವದ ಆಯಾಮವಾಗಿದೆ. ' ಅರಿತವರಿಗೆ ' ಮಾಯ ಶಕ್ತಿ, ಅರಿಯದವರಿಗೆ ಮಾಯೆ ಮಾರಿ, ಎನ್ನುವರು ಶರಣರು ವಚನ ಯುಗದಲ್ಲಿ ನಾವು ಅನೇಕ ಬದಲಾವಣೆಗಳು ಆಗುವುದನ್ನು ಗಮನಿಸಬಹುದು. ಸ್ತ್ರೀ ವಿರೋಧಿಯಾಗಿದ್ದ ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಗಳ ಬಿಗಿ ನೀತಿಗಳು ಸಡಿಲಗೊಂಡು ಹೆಣ್ಣಿನ ಬದುಕು ಭಾವನೆಗಳು ಪರಿಧಿಗಳು ವಿಸ್ತಾರಗೊಂಡವು ಸತಿತ್ವ, ಮಾತೃತ್ವದ ಮುಚ್ಚಳದಲ್ಲಿ, ಕೌಟುಂಬಿಕ ವರ್ತುಲದಲ್ಲಿ ಮುಸುಕಾಗಿದ್ದ ಆತ್ಮೋದ್ಧಾರದ ಆಸಕ್ತಿ, ವೈಯಕ್ತಿಕತೆಯ ಅರಿವು ಜಾಗೃತಗೊಂಡು ಸ್ವಂತಿಕೆ ಸ್ವಾಭಿವ್ಯಕ್ತಿಯ ಮಾರ್ಗವನ್ನು ಕಂಡುಕೊಂಡಿತು ಸ್ತ್ರೀ ಸಂಬಂಧಿತ ಅನೇಕ ಮಿಥ್ಯೆಗಳನ್ನು ಒಡೆಯುವಲ್ಲಿ ಯಶಸ್ವಿಯಾಯಿತು. ಸಹಜೀವಿಗಳಾಗಿ ಸ್ವತಂತ್ರ ವ್ಯಕ್ತಿಗಳಾಗಿ ಮನ್ನಿಸಿದ ಶರಣರ ವೈಚಾರಿಕತೆಯ ಫಲವೇ ಮಹಿಳೆಯರ ಸೃಜನಶೀಲತೆ, ಸಾಮಾಜಿಕ, ಧಾರ್ಮಿಕ, ಸಹಯೋಗ ಮತ್ತು ಆಧ್ಯಾತ್ಮಿಕ ಸತ್ವಕ್ಕೆ ಮೊದಲ ಮನ್ನಣೆ ಪ್ರಾಪ್ತವಾಯಿತು.

ಜೀವನಾನುಭವದ ಉತ್ಕಟ ಭಾವಸ್ಥಿಯನ್ನು ಹಾಡಾಗಿಸಿದ ಮಹಿಳೆಯ ಸೃಜನಶೀಲತೆ ಕಾವ್ಯ ಪ್ರತಿಭೆ, ಕಲ್ಪನಾ ಶಕ್ತಿ, ಬೌದ್ಧಿಕತೆಗೆ ಮೌಖಿಕ ಸಾಹಿತ್ಯದ ಸಮೃದ್ಧ ಪರಂಪರೆಯ ನಿದರ್ಶನವಿದೆ. ಆರಂಭದಿಂದಲೂ ತನ್ನ ರಚನೆಗಳಲ್ಲಿ ತನ್ನ ವೇದನೆ ಸಂವೇದನೆಯ ಸಮೃದ್ಧ ಭಾವ ಪ್ರಪಂಚವನ್ನು ಸೂರೆಗೊಂಡಿರುವ ಅಪೂರ್ವ

ಕವಯತ್ರಿ ತನ್ನ ಬರವಣಿಗೆಯಿಂದ ಸಮಾಜ ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಧಾನ ವಾಹಿನಿಯಾಗಿ ಮಹಿಳೆ ಸಾಹಿತ್ಯ ಪರಂಪರೆಯನ್ನು ಉಜ್ವಲಗೊಳಿಸಿದ ಸ್ತ್ರೀ ಪ್ರತಿಭೆ ತನ್ನ ಅಸ್ತಿತ್ವದ ಗಟ್ಟಿ ನೆಲೆಯಾಗಿ ಪರಿಗಣಿಸಲಾಗಿದೆ.

ವೈಚಾರಿಕ ಮತ್ತು ಆಧ್ಯಾತ್ಮಿಕ ಸಂಸರ್ಗದಲ್ಲಿ ಭಕ್ತಿ ಮಾರ್ಗದ ಸಾಧಕಿಯರಾಗಿ ಚಿಂತನಾಶೀಲರಾಗಿ ಶ್ರೇಷ್ಠ ಅನುಭಾವಿಗಳಾಗಿ ಹೊರಹೊಮ್ಮಿದ ಮಹಿಳೆಯರು ಕನ್ನಡ ಮಹಿಳಾ ಸಾಹಿತ್ಯ ಮತ್ತು ಸಾಂಸ್ಕೃತಿಕ ಸತ್ತ್ವಪೂರ್ಣ ಪರಂಪರೆಯನ್ನು ನಿರ್ಮಿಸಿದರು. ಮಹಿಳೆಯರ ಸ್ವಾನುಭವ, ಸಾಮಾಜಿಕ ಪ್ರಜ್ಞೆ ಮತ್ತು ಕಾವ್ಯ ಪ್ರತಿಭೆಯ ನಿದರ್ಶನಗಳಾಗಿರುವ ಅವರ ಸಾಹಿತ್ಯ ಅವರ ಅಂತರಂಗ ಸಾಧನೆ ಶೋಧನೆ ಮತ್ತು ಜೀವನಾನುಭವದ ವೈವಿಧ್ಯವನ್ನು ಒಳಗೊಂಡಿದೆ. ಸರಳ ಸಹಜ ಭಾಷೆಯಲ್ಲಿ ಬದುಕಿನ ಅನುಭವವನ್ನು ಸುಪರಿಚಿತ ವಸ್ತು ವಿವರಗಳ ಮೂಲಕ ಅಭಿವ್ಯಕ್ತಿಸುತ್ತಿರುವಲ್ಲಿ ಸ್ತ್ರೀ ವಿಶಿಷ್ಟತೆಯ ಎತ್ತಿತೋರಿಸುತ್ತದೆ.

ಕಳೆದ ಶತಮಾನದ ಆರಂಭ ಕಾಲದಿಂದ ೧೯೭೦ರ ವರೆಗಿನ ಬದುಕು ಬರಹಗಳನ್ನು ಗಮನಿಸಿದಾಗ ಹಲವು ಸಮಾನ ಅಂಶಗಳನ್ನು ಕಾಣಬಹುದಾಗಿದೆ, ಕೆಲವು ಊಹೆಯೂ ಇರಬಹುದು. ಈ ಕಾಲ ಘಟ್ಟದಲ್ಲಿ ಕಾಣಿಸಿಕೊಂಡ ಲೇಖಕಿಯರು ಸಂಪ್ರದಾಯ ಬದ್ಧ ವಾತಾವರಣದಲ್ಲಿ ಪುರುಷ ಪ್ರಧಾನ ಬಲಿಷ್ಠ ವ್ಯವಸ್ಥೆಯ ಬಂಧನದಲ್ಲಿ ಸಿಲುಕಿ ಬಾಲ್ಯ ವಿವಾಹ, ಬಸುರಿ, ಬಾಣಂತನ, ಹಾಗೂ ಬಹಳ ಚಿಕ್ಕ ಪ್ರಾಯದಲ್ಲಿ ವೈಧವ್ಯಕ್ಕೆ ಒಳಗಾದವರನ್ನು ಗಮನಿಸಬಹುದು. ಅಂತೆಯೇ ಹಿರಿಯರು ಹೇಳಿದ ದಾರಿಯಲ್ಲಿ ನಡೆಯಬೇಕಾದ ಅನಿವಾರ್ಯ ಕಾರಣದಿಂದ ಲೇಖಕಿಯರು ತಮಗೆ ಸಿಕ್ಕಿದ ಸೀಮಿತ ಅವಕಾಶದಲ್ಲಿ ಬರವಣಿಗೆಯನ್ನು ಬರೆದರು. ಶೀಘ್ರ ವಿವಾಹ ಮನೆ ಜವಾಬ್ದಾರಿ, ಶಿಕ್ಷಣ ಕೊರತೆ, ಬಡತನ ಹೆಂಗಸರ ನಡತೆಯ ಮೇಲಿನ ಕಟ್ಟು ನಿಟ್ಟು ಈ ಎಲ್ಲಾ ಒತ್ತಡಗಳನ್ನು ಈ ಹಂತದ ಲೇಖಕಿಯರ ಬದುಕಿನಲ್ಲಿ ಗಮನಿಸಬಹುದು ಉದಾ - ತಿರುಮಲಾಂಬ, ಪಡುಕೋಣೆ, ಸರಸ್ವತಿ ಬಾಯಿ, ರಾಜವಾಡೆ, ಲೀಲಾ ಬಾಯಿ ಕಾಮತ್, ಈ ಮಹಾ ಲೇಖಕಿಯರು ಈ ಪರಿಸ್ಥಿತಿಗಳಿಗೆ ಸಿಲುಕಿದವರು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳಾ ಸಾಹಿತ್ಯ ಚರಿತ್ರೆ ಗಮನಿಸುವಾಗ ಮಹಿಳೆಯರಿಗೆ ಸಿಕ್ಕಿದ ಪ್ರಾತಿನಿಧ್ಯ ದಾಖಲೆಯ ಗೌರವ ಮತ್ತು ವಿಮರ್ಶೆ ಕ್ವಚಿತ್ತಾದದ್ದು 'ತಿರುಮಲಾಂಬ' ಅವರಿಂದ ೧೯೫೦ ರವರೆಗಿನ ಕನ್ನಡ ಮಹಿಳಾ ಸಾಹಿತ್ಯದಲ್ಲಿ ಆಧುನಿಕ ಕನ್ನಡ ಮಹಿಳಾ ಸಾಹಿತ್ಯದ ಪ್ರಾರಂಭದ ಬಿಂದುವನ್ನು ಕಾಣಬಹುದು. ಅಂದರೆ ಇವರಿಗಿಂತ ಪೂರ್ವದಲ್ಲಿ ಮಹಿಳಾ ಲೇಖಕಿಯರು ಇರಲಿಲ್ಲವೆಂದಲ್ಲ ತಿರುಮಲಾಂಬ ಅವರ ಪ್ರಾಮುಖ್ಯತೆಯೇನೆಂದರೆ ಸಾಹಿತ್ಯದ ವಸ್ತು, ಸಂವೇದನೆ, ಶೈಲಿ ಮತ್ತು ಪ್ರಕಾರಗಳ ದೃಷ್ಟಿಯಿಂದ ಮಹಿಳಾ ಸಾಹಿತ್ಯಕ್ಕೆ ಪ್ರಾರಂಭದಲ್ಲಿ ಅಗತ್ಯವಾಗಿದ್ದ ಗುರುತು ಮತ್ತು ಆತ್ಮ ವಿಶ್ವಾಸವನ್ನು ನೀಡಿದ ಲೇಖಕಿ ಇವರು ಸಾಹಿತ್ಯವನ್ನು ತಮ್ಮ ಪ್ರಮುಖ ಅಭಿವ್ಯಕ್ತಿ ಮಾಧ್ಯಮವಾಗಿ ಸ್ವೀಕರಿಸಿ ಆ ಕ್ಷೇತ್ರದಲ್ಲಿ ಹಲವು ದಶಕಗಳ ಕಾಲ ತೊಡಗಿಸಿಕೊಂಡು ಪ್ರಕಟಣೆಯತ್ತಲೂ ಮನಸ್ಸು ಮಾಡಿ ಸ್ತ್ರೀಯರ ಸಾಹಿತ್ಯ ಮಾಧ್ಯಮ ಪ್ರವೇಶವನ್ನು ಆರಂಭಿಸಿದವರು ತಿರುಮಲಾಂಬಾವರು.

ಮಹಿಳೆಯರ ಸಾಧನೆಗಳು ಗೌಣವೆಂದೇ ಪರಿಗಣಿಸಲ್ಪಡುತ್ತಿದ್ದ ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ಇಂದಿಗೂ ಮಹಿಳಾ ಸಾಹಿತ್ಯ ಪರಿಪಾಠವಿರಲಿಲ್ಲ ಹೀಗಾಗಿ ಈ ಮಹಿಳಾ ಸಾಹಿತಿಗಳ ಸಾಧನೆಗಳ ಮೇಲೆ ಬೆಳಕು ಚೆಲ್ಲಿ ಅವರು ಮಾಡಿರುವ ಕೆಲಸಗಳ ಬಗ್ಗೆ ತಿಳಿದು ಕೊಳ್ಳುವ ಪ್ರಯತ್ನಗಳು ನಡೆದಿವೆ. ಮನೆಯಲ್ಲಿನ ಧಾರ್ಮಿಕ ವಾತಾವರಣ ದೈವಭಕ್ತಿ, ಪುರಾಣ ಪ್ರವಚನ, ಹಾಡು ಹಸೆಗಳ ವಾತಾವರಣದಲ್ಲಿ ಬೆಳೆದ ಅನೇಕ ಲೇಖಕಿಯರು ಇದ್ದಾರೆ ಇವರ ಸಾಹಿತ್ಯದಲ್ಲಿ ದೇವರ ಹಾಡುಗಳು, ಕೀರ್ತನೆ, ಭಕ್ತಿ ಸಾಹಿತ್ಯದ ಮಾದರಿಗಳನ್ನು ಕಾಣಬಹುದು.

**2.4.0 - ದಕ್ಷಿಣ ಕನ್ನಡ ಜಿಲ್ಲೆಯ ಮೊದಲ, ಲೇಖಕಿಯರು :-**

೧ ಮುಳಿಯ ಮೂಕಾಂಬಿಕಾ ಅಮ್ಮ - ೧೮೭೦ - ೧೯೪೨

೨. ಉಳ್ಳೂರು ಮೂಕಾಂಬಿಕಮ್ಮ - ೧೯೦೮ -೧೯೯೮

೩ ನೆಲ್ಲಿಕಾರು ಜೈನ ಮಹಿಳೆ - ರಾಧಮತಿ ೧೮೯೯ - ೧೯೬೮

೪ ಸೀತಾದೇವಿ ಪಡುಕೋಣೆ ೧೯೦೩ - ೧೯೬೯

೫ ವಾಸಂತಿ ಬಾಯಿ ಪಡುಕೋಣೆ ೧೯೦೮ - ೧೯೫೫

೬ ಬೆಳ್ಳೆ ಸೀತಾ ರತ್ನಮ್ಮ ೧೯೧೦ - ೧೯೯೫

೭ ಲೀಲಾ ಬಾಯಿ ಕಾಮತ್ - ೧೯೧೧

೮ ಚಂದ್ರ ಭಾಗಿ ಕೆರೈ - ೧೯೧೬

೯ ಲೀಲಾ ಕಾರಂತ ೧೯೨೦ - ೧೯೬೮

೧೦ ಆನಂದಿ ಸದಾಶಿವರಾವ್ - ೧೯೨೬

೧೧ ಶಾರದ ಶಾಸ್ತ್ರಿ - ೧೯೨೫

೧೨ ಲಲಿತಾ ರೈ - ೧೯೨೮

**ಮುಳಿಯ ಮೂಕಾಂಬಿಕಾ ಅಮ್ಮ : ( ೧೮೭೦ - ೧೯೪೨ )**

ಇವರದು ಅಸಾಧಾರಣ ಪಾಂಡಿತ್ಯ ' ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಿಮತಿಗಳ್ ' ಇವರು ಆಗಿದ್ದರೆಂದರೆ ಅತಿರೇಕದ ಮಾತೇನಲ್ಲಿ ಮೂಲತಃ ಬಂಟ್ವಾಳ ತಾಲ್ಲೂಕಿನ ಪುಣಚ ಗ್ರಾಮದ ಮಲೆತಡ್ಕ ಎಂಬಲ್ಲಿ ೧೯ ನೇ ಶತಮಾನದ ಉತ್ತರಾರ್ಧದಲ್ಲಿ ಸುಮಾರು ೧೮೭೦ ರಲ್ಲಿ ಜನಿಸಿದ್ದರು.

ಮನೆಯಲ್ಲಿ ಸಂಸ್ಕೃತ ಮತ್ತು ಹಳೆಗನ್ನಡಗಳನ್ನು ತಿಳಿದ ಪಂಡಿತರಿದ್ದರು. ಅಂದಿನ ಪದ್ಧತಿಯಂತೆ ಹೆಣ್ಣು ಮಗು ಶಾಲೆಗೆ ಹೋಗುವಂತಿರಲಿಲ್ಲ ಆದರೂ ಮನೆಯೊಳಗೆ ಅಷ್ಟಷ್ಟು ವಿದ್ಯಾಭ್ಯಾಸ ನಡೆಯುತ್ತಿತ್ತು. ಶ್ರೀಮಂತ ಮನೆತನದವರಾದ ಮುಳಿಯ ಕೃಷ್ಣ ಭಟ್ಟರ ಧರ್ಮ ಪತ್ನಿಯಾದ ಮೂಕಾಂಬಿಕೆಯವರು ಮಕ್ಕಳು ಎಳೆಯ ಕುಡಿಗಳಿದ್ದಾಗಲೇ ವಿಧವೆಯಾದರು. ಅಂದಿನ ಸಮಾಜದ ಕಟ್ಟು ಕಟ್ಟಳೆಗೆ ಒಳಗಾದ ಮೂಕಾಂಬಿಕೆಯವರು ಹುಟ್ಟಿದ ಮನೆಯಲ್ಲಿ ಹಿರಿಮೆಗಳನ್ನು ಕರಗತವಾಗಿಸಿಕೊಂಡು ಕನ್ನಡ ಸಂಸ್ಕೃತ ವೈದ್ಯಕೀಯವನ್ನೆಲ್ಲಾ ಕಲಿತು ಕೊಂಡಿದ್ದ ಇವರು ಅಂತರಂಗದೊಳಗೆ ಅಡಗಿದ್ದ ಸಾಹಿತ್ಯ ಪ್ರೀತಿಗೆ ರೂಪವನ್ನು ಕೊಡಲು ಪ್ರಯತ್ನಿಸಿದವರು ನಿಂತಲ್ಲಿ ಕೂತಲ್ಲಿ ಶೋಭಾನೆ ಪದಗಳನ್ನು ಕಟ್ಟಿ ಹಾಡುತ್ತಿದ್ದರು. ಆ ಕವಯತ್ರಿಗೆ ಪೌರಾಣಿಕ ವಸ್ತುಗಳತ್ತ ಹೆಚ್ಚು ಒಲವು ಈ ಲೇಖಕಿ ರಚಿಸಿದ ಕೃತಿಗಳು ಹಲವು ಸೀಮಿತ ಬದುಕಿನಲ್ಲಿ ನಿರರ್ಗಳ ಕವಿತಾ ಶಕ್ತಿಯನ್ನು ಮೆರೆದಿದ್ದಾರೆ.

**ಉಳ್ಳೂರು ಮೂಕಾಂಬಿಕಮ್ಮ :- ( ೧೯೦೮ -೧೯೯೮ )**

ಹತ್ತನೇಯ ವರ್ಷಕ್ಕೆ ಮದುವೆಯಾಗಿ ಹದಿನಾರನೆಯ ವಯಸ್ಸಿಗೆ ವಿಧವೆಯಾದರು. ಶ್ರಮಜೀವಿಯಾದ

ಇವರು ಅಣ್ಣನ ಆಶ್ರಯದಲ್ಲಿ ಕಳೆದರು. ಬರೆಯಲುಬಾರದ ಅವರಿಗೆ ಕವಿತ್ವ ತಮ್ಮ ಮನೆತನದ ಹಿನ್ನೆಲೆಯಿಂದ ಬಂದಿರಬೇಕು. ಬೌಲಾಡಿ ಮಹಾಲಕ್ಷ್ಮಿ ( ಮುದ್ದಣ್ಣನ ಮೇಲೆ ಪ್ರಭಾವ ಬೀರಿದ್ದ ಯಕ್ಷಗಾನ ಕವಯತ್ರಿ) ಇವರ ಅಜ್ಜಿ, ತಾಯಿ ಸರಸ್ವತಿಯೂ ಸಹಜ ಕವಿಯಾಗಿದ್ದರು. ಮಹಾಕವಿ ಗೋಪಾಲಕೃಷ್ಣ ಅಡಿಗರೂ, ಕವಿ ಬಿ. ಎಚ್. ಶ್ರೀಧರರೂ ಇವರ ಕುಂಟುಂಬಕ್ಕೆ ಸೇರಿದವರೆಂದಾಗ ಕವಿತ್ವದ ಕೌಟುಂಬಿಕ ಹಿನ್ನೆಲೆಯನ್ನು ತಿಳಿಯಬಹುದು. ಇವರು ಪತ್ರಗಳನ್ನುಪದ್ಯ ರೂಪದಲ್ಲೇ ಮೂಲಕ ಸ್ಪಂದಿಸುತ್ತಿದ್ದಾ ಅವರ ಆಸಕ್ತಿ ಬೆರಗು ಹುಟ್ಟಿಸುವಂತದ್ದು ನಿಷ್ಪುರವಾದಿ ಈ ಕವಯತ್ರಿ, ಪತ್ರ ಕವನಗಳು, ಸುನೀತಗಳು ದೇವರ ನಾಮಗಳು, ವ್ಯಕ್ತಿ ಚಿತ್ರಣಗಳು, ಸ್ವಾನುಭವ ಕಥನ ಹೀಗೆ ಹಲವು ಪದ್ಯಗಳನ್ನು ಕಟ್ಟಿರುವ ಪ್ರತಿಭೆ ಇವರದು.

ಸೀತಾದೇವಿ ಪಡುಕೋಣೆ :- ( ೧೯೦೩- ೧೯೬೦ )

ದ.ಕ ಜಿಲ್ಲೆಯ ಪುತ್ತೂರಿನ ಹೆಸರಾಂತ ಬಾಹು ಭಾಷಾ ಪರಿಚಯವನ್ನು ಹೊಂದಿದ್ದು, ಇವರ ಬಹುಮುಖಿ ವ್ಯಕ್ತಿತ್ವಕ್ಕೆ ಕನ್ನಡದ ಹಿರಿಯ ಲೇಖಕರಾದ ಮಾಸ್ತಿ,ವಿ.ಸೀ ಕೈಲಾಸಂ ಅವರೇ ಮೆಚ್ಚುಗೆಯ ಮಾತುಗಳನ್ನು ಆಡಿರುವರು. ವಿವಿಧ ಸದಭಿರುಚಿಗಳೊಂದಿಗೆ ಸೀತಾದೇವಿಯವರಿಗೆ ಲಲಿತ ಕಲೆಗಳಲ್ಲಿಯೂ ಅಪಾರ ಆಸಕ್ತಿ, ಅಭಿನಯ ಅವರ ಪ್ರೀತಿಯ ಹವ್ಯಾಸವೂ ಆಗಿತ್ತು ಸೀತಾದೇವಿಯವರು ಹಲವಾರು ಸ್ವತಂತ್ರ ಕತೆಗಳನ್ನು ಬರೆದಿರುವುದಲ್ಲಿದೆ ಇಂಗ್ಲೀಷ್, ಮರಾಠಿಗಳಿಂದ ಹಲವಾರು ಕತೆಗಳನ್ನು ಅನುವಾದ ಮಾಡಿದ್ದಂತೆ ತಿಳಿದು ಬರುತ್ತದೆ.

ವಾಸಂತಿ ಬಾಯಿ ಪಡುಕೋಣೆ :- ( ೧೯೦೮-೧೯೯೫ )

ದ.ಕ ಕನ್ನಡ ಮೂಲದ ಈ ಲೇಖಕಿ ಬರ್ಮಾದ ಮಿಥಿಲದಲ್ಲಿ ಹುಟ್ಟಿದರು ವಾಸಂತಿ ಬಾಯಿಯವರ ಜೀವನ ತುಂಬ ಏರಿಳಿತಗಳೊಂದಿಗೆ ಕೂಡಿತ್ತು. ಸಂಗೀತ, ನಾಟಕ, ನಾಟ್ಯ, ಚಿತ್ರ, ಭಾಷಾ ಕಲಿಕೆಗಳಲ್ಲಿ ಆಸಕ್ತಿಯಿತ್ತು. ಕಷ್ಟಗಳ ನಡುವೆಯೂ ವಾಸಂತಿಯವರು ಬದುಕನ್ನು ಕುತೂಹಲದಿಂದ ನೋಡುತ್ತಿದ್ದರು ವಿಚಾರವಂತಿಕೆಯನ್ನು ಉಳ್ಳವರಾಗಿದ್ದರು ಬದುಕಿನಲ್ಲಿ ಎದುರಿಸಿದ ಕಷ್ಟ ಇದರಿಂದ ಎದುರಿಸಿದ ಹಲವಾರು ಸವಾಲುಗಳು ಇವುಗಳ ನಡುವೆ ಶ್ರಮ ಪಟ್ಟು ಮೆಟ್ರಿಕ್ ತೇರ್ಗಡೆ ಹೊಂದಿದ ಇವರು ವಾಲ್ಟರ್ ಥಾಮ್ಸನ್ ಕಂಪನಿಯವರ ಭಾಷಾಂತರ ಕೆಲಸ ಗಳಿಸಿ ಈ ನಡುವೆ ಅನೇಕ ಕತೆಗಳು, ಆತ್ಮ ಚರಿತ್ರೆ, ಅನುವಾದ ಹೀಗೆ ಬೇರೆ ಬೇರೆ ಪ್ರಕಾರಗಳಲ್ಲಿ ಬರೆಯುತ್ತಾ ಹೋದರು ಬಹು ಭಾಷೆಗಳಲ್ಲಿ ಹಿಡಿತವನ್ನು ಸಾಧಿಸಿದ್ದರು. ಇವರ ಮುಖ್ಯ ಬರವಣಿಗೆಯ ಕ್ಷೇತ್ರವೆಂದರೆ ಸಣ್ಣ ಕತೆ, ಅನುವಾದ ಮತ್ತು ಆತ್ಮ ಕಥನ ತುಂಬು ಕಷ್ಟದ ಬದುಕನ್ನು ಬದುಕಿ, ಹೆಂಗಸಿನ ಕೌಂಟುಂಬಿಕ ಇಕ್ಕಟ್ಟು ಸ್ವತಃ ದುಡಿಮೆ ತಮ್ಮನ್ನು ಘಾಸಿಗೊಳಿಸಿದ ಬಗ್ಗೆ ತಮ್ಮ ಆತ್ಮ ಕಥನದಲ್ಲಿ ಧೈರ್ಯವಾಗಿ ಬಿಚ್ಚಿಟ್ಟಿದ್ದು ವಾಸಂತಿಯವರ ವಿಶಿಷ್ಟತೆ.

ಭಾರತೀ ಬಾಯಿ ಪಣಿಯಾಡಿ :- ( ೧೯೧೦ -೧೯೪೫ )

ಬಾಲ್ಯದಿಂದಲೇ ಸಂಗೀತ, ಸಾಹಿತ್ಯದತ್ತ ಒಲವನ್ನು ಹೊಂದಿದವರಿವರು ಕೇವಲ ಐದನೆಯ ತರಗತಿಯ ವಿದ್ಯಾಭ್ಯಾಸವನ್ನು ಹೊಂದಿದ ಇವರು ದಾಸರ ಪದಗಳನ್ನು ಸುಶ್ರಾವ್ಯವಾಗಿ ಹಾಡುವುದರೊಂದಿಗೆ ತಂದೆಯ

ಅಪ್ಪಣೆಯಂತೆ ತಾನೇ ಹಾಡು ಕಟ್ಟಿ ಹಾಡಿದ್ದು ಇದೆ. ೧೫ ನೇ ವಯಸ್ಸಿನಲ್ಲಿಯೇ ವಿವಾಹ ಹೊಂದಿದರು. ಗಂಡ ಶ್ರೀನಿವಾಸ ಉಪಾಧ್ಯಾಯ ಪಣಿಯಾಡಿಯವರೊಂದಿಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲುಗೊಂಡು, ಖಾದಿದಾರಿಯಾದವರು ಹಾಗೂ ಎಳೆ ವಯಸ್ಸಿನಲ್ಲಿಯೇ ಕ್ಷಯರೋಗಕ್ಕೆ ತುತ್ತಾಗಿ ಸಾವನ್ನಪ್ಪಿದರು. ಪತಿ ಪಣಿಯಾಡಿಯವರು 'ಅಂತರಂಗ' ಎಂಬ ವಾರಪತ್ರಿಕೆಯ ಸಂಪಾದಕರಾಗಿದ್ದು, ಇದು ಭಾರತಿಯವರ ಸಾಹಿತ್ಯ ಶಕ್ತಿಗೆ ಇಂಬು ಕೊಟ್ಟಂತಾಯಿತು. ಅನೇಕ ಕತೆ, ಕವನ ಪ್ರಕಟಗೊಂಡಿವೆ.

ಮಟ್ಪಾಡಿ ಕಮಲಾಕ್ಷಿ, ಕೃಷ್ಣವೇಣಿ ಬಾಯಿ, ಆರ್. ಸತ್ಯಾಭಾಮಾದೇವಿ ಇವರೆಲ್ಲಾ ಉಡುಪಿಯ ಕತೆಗಾರ್ತಿಯಾಗಿದ್ದರು. ಇವರ ಜೀವನ ವೃತ್ತಾಂತದ ಬಗ್ಗೆ ಹೆಚ್ಚು ಮಾಹಿತಿ ದೊರಕಿಲ್ಲ. ಹಾಗೂ ಸುಮಾರು ೨೦ ನೇ ಶತಮಾನದ ಮೊದಲ ಭಾಗ ಇವರ ಕಾಲ ಎಂದು ಗುರುತಿಸಲಾಗಿದೆ. ಪತ್ರಿಕೆಗಳಲ್ಲಿ ಇವರ ಕತೆಗಳು ಲೇಖನಗಳು ಪ್ರಕಟಗೊಂಡಿರುವ ವಿವರಗಳು ದೊರಕುತ್ತವೆ.

ಬೆಳ್ಳೆ ಸೀತಾರತ್ನಮ್ಮ ಇವರು ಸಾಹಿತ್ಯ ರಚನೆ ಆರಂಭಿಸಿದ್ದು ಮೂವತ್ತರ ಹರೆಯದಲ್ಲಿ ಆದರೆ ಬಾಲ್ಯದಲ್ಲಿ ತಂದೆಯೊಂದಿಗೆ ಊರೂರು ಸುತ್ತಬೇಕಾದುದರಿಂದ ಪ್ರಾಥಮಿಕ ಶಿಕ್ಷಣವನ್ನು ಕಾನ್ವೆಂಟ್‌ನಲ್ಲಿ ಪಡೆದಿದ್ದರು. ಇದು ಅವರಿಗೆ ತಮಗೆ ಆಧ್ಯಾತ್ಮಿಕ ವಿಚಾರಗಳ ವಿಷಯಗಳ ತಿಳುವಳಿಕೆಗೆ ಸಹಾಯಕವಾಗಿದ್ದವು ಅನೇಕ ಸಾಹಿತ್ಯ ದಿಗ್ಗಜಗಳ ಸಂಪರ್ಕ ಸೀತಾರತ್ನಮ್ಮ ಅವರ ಸಾಹಿತ್ಯ ರಚನೆಗೆ ಪ್ರೇರಕವೂ ಆಯಿತು. ಅತ್ಯಂತ ಭಾವುಕ ಮನೋಭಾವದ ಸೀತಾರತ್ನಮ್ಮ ಅವರ ರಚನೆಗಳಲ್ಲಿ ಎದ್ದು ಕಾಣುವ ಅಂಶ ದೈವಭಕ್ತಿ ಅದನ್ನುಳಿದು ಅವರ ಬರಹವೇ ಇಲ್ಲವೋ ಎಂಬಂತೆ ಕೃತಿಗಳಲ್ಲಿ ದೇಶ ಪ್ರೇಮ ಪ್ರತಿಬಿಂಬಿಸುತ್ತದೆ.

**ಲೀಲಾ ಬಾಯಿ ಕಾಮತ್ :- ( ೧೯೧೧ )**

ಸ್ವಾತಂತ್ರ್ಯ ಪೂರ್ವದ ಅಪೂರ್ವ ಲೇಖಕಿಯರಲ್ಲಿ ಒಬ್ಬರು ಇವರ ಹುಟ್ಟೂರು ದ.ಕ ಜಿಲ್ಲೆಯ ಮಂಗಳೂರು ವಿದ್ಯಾಭ್ಯಾಸ ಐದನೇಯ ತರಗತಿ. ಬಹಳ ಚಿಕ್ಕ ವಯಸ್ಸಿನಲ್ಲಿಯೇ ವಿವಾಹವಾಯಿತು. ಬಹು ಭಾಷೆಗಳಲ್ಲಿ ಪಾಂಡಿತ್ಯವನ್ನು ಹೊಂದಿರುವವರು. ವಿವಾಹ ನಂತರವೂ ತಮ್ಮ ಕ ಲಿಕೆಯವನ್ನೇ ಮುಂದುವರಿಸಿದವರು ಇವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿದ್ದು ಅನುವಾದ ಕತೆಗಳ ಮೂಲಕ ಸ್ವದೇಶಾಭಿಮಾನಿ ಪತ್ರಿಕೆಯಲ್ಲಿ ಇವರ ಅನುವಾದ ಕತೆ ಪ್ರಕಟಣೆಗೊಂಡಿದ್ದು ಸುಮಾರು ೭೦ ಕ್ಕು ಮಿಕ್ಕು ಕತೆಗಳು ಕರ್ನಾಟಕದ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟಗೊಂಡಿರುವುದನ್ನು ಗಮನಿಸಬಹುದು. ತಮ್ಮ ಪೂರ್ವ ಶ್ರಮವನ್ನು, ಸಾಮರ್ಥ್ಯವನ್ನು ದಂಪತಿಗಳಿಬ್ಬರೂ ಇದಕ್ಕೆ ವ್ಯಯಿಸಿರುವುದು ಗಮನಾರ್ಹ ಈ ಕಾಯಕದಲ್ಲಿ ಮುಂದೆ ಪ್ರೇರಣೆಗೊಂಡು ತಾವು ಸ್ವತಂತ್ರವಾಗಿ ಕತೆಗಳನ್ನು ಬರೆದಿರುವುರು.

**ಸರಸ್ವತಿ ಬಾಯಿ ರಾಜವಾಡೆ ( ಗಿರಿ ಬಾಲೆ ) :- ( ೧೯೧೩-೧೯೯೪ )**

ಸರಸ್ವತಿ ಬಾಯಿ ರಾಜವಾಡೆ ಉಡುಪಿಯ ಸಮೀಪದ ಕಟ್ಟಂಗೇರಿ ಬಳಿಯ ಬಳಂಜಾಲ ಎಂಬಲ್ಲಿ ಜನ್ಮವೆತ್ತಿದರು. ಕಡು ಬಡತನದಿಂದಾಗಿ ಹೂ ಮಾರಿ, ಮನೆ ಕೆಲಸ ಮಾಡಿ ನಾಟಕ ಸಿನಿಮಾಗಳಲ್ಲಿ ಅಭಿನಯಿಸಿ ಎಲ್ಲೆಲ್ಲಿಯೂ ತಿರಸ್ಕಾರಗೊಂಡು ಬೆಳೆದು ಪ್ರೀತಿ ಕಾಣದೆ ಬಳಲಿ ಏಕಾಕಿತನದಿಂದ ಕಂಗಾಲಾಗಿ ಬದುಕಿದವರಿವರು.

ಮುಂದೆ ಕರಗದಂತಹ ಶ್ರೀಮಂತಿಕೆಗೆ ಒಡತಿಯಾಗಿ ಬಾಳಿದವರು. ಮುಂದೆ ಸಾಹಿತ್ಯ ರಚನೆಗೆ ಪ್ರೋತ್ಸಾಹ ದೊರೆತು ಅನೇಕ ಪತ್ರಿಕೆಗಳಿಗೆ ಕತೆ, ಕಾವ್ಯ, ಪ್ರಬಂಧ, ಅಂಕಣ ಬರೆದವರು. ಇವರ ಸಾಹಿತ್ಯದ ರೀತಿರೂಪಗಳನ್ನು ಗಮನಿಸುವುದಾದರೆ ಇವರು ಕತೆಗಳನ್ನು ಮತ್ತು ಕೀರ್ತನೆಗಳನ್ನು ಹೆಚ್ಚಾಗಿ ಬರೆದಿದ್ದಾರೆ. ಅವರ ಬರಹ ಮುಖ್ಯವಸ್ತು, ಸ್ತ್ರೀ ಜತೆಗೆ ಅವಳ ಎಲ್ಲ ನಿರ್ಣಯ, ತಾಕಲಾಟಗಳಿಗೆ ಆಧ್ಯಾತ್ಮಿಕ ತಳಹದಿ ಇರುವುದು ಗೋಚರವಾಗುತ್ತದೆ.

**ಚಂದ್ರ ಭಾಗಿ ಕೆ.ರೈ ( ೧೯೧೬ - ೨೦೦೬ ) :-**

ಬಂಟ್ವಾಳ ತಾಲೂಕಿನ ಅನಂತಾಡಿ ಗ್ರಾಮದಲ್ಲಿ ಜನಿಸಿದವರು. ವಿದ್ಯಾಭ್ಯಾಸ ಏಳನೆಯ ತರಗತಿಯವರೆಗೆ ಚಿಕ್ಕಂದಿನಿಂದಲೇ ಉತ್ತಮ ಪುಸ್ತಕಗಳನ್ನು ಓದುವ ಹವ್ಯಾಸವಿಟ್ಟುಕೊಂಡಿದ್ದ ಈಕೆ ಬಾಲ್ಯದಲ್ಲಿಯೇ ನಾಟಕವನ್ನು ರಚಿಸಲು ಆರಂಭಿಸಿದ್ದರು. ಅನೇಕ ಲೇಖನಗಳನ್ನು, ಹಲವು ತುಳು ಕವಿತೆಗಳನ್ನು ನೀಳ್ಗತೆಯನ್ನು ರಚಿಸಿದ್ದಾರೆ. ಹಲವು ಪತ್ರಿಕೆಗಳಲ್ಲಿ ಪ್ರಕಟಗೊಂಡಿದೆ. ಸ್ತ್ರೀ ವಿದ್ಯಾಭ್ಯಾಸ, ಹರಿಜನೋದ್ಧಾರ, ವರದಕ್ಷಿಣೆ ಮುಂತಾದವುಗಳ ಕುರಿತು ವಿಚಾರ ಲೇಖನಗಳನ್ನು ಬರೆದಿದ್ದಾರೆ.

**ಆನಂದಿ ಸದಾಶಿವ ರಾವ್ :( ೧೯೨೬ ) :-**

ಮೂಲತಃ ಮಂಗಳೂರಿನವರೇ ಆದ ಇವರು ಉನ್ನತ ಶಿಕ್ಷಣವನ್ನು ಹೊಂದಿದವರು ಎಳೆಯ ವಯಸ್ಸಿನಲ್ಲಿಯ ಓದಿನ ಆಸಕ್ತಿಯೇ ಬರವಣಿಗೆಯತ್ತ ಇವರನ್ನು ಪ್ರೇರೇಪಿಸಿತು. ಇವರು ಬರೆದ, ಕತೆ, ಲೇಖನಗಳು, ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಗೊಂಡಿದೆ. ಇವರದು ಸರಳ ಭಾಷೆ ಮತ್ತು ನಿರಾಡಂಬರ ಶೈಲಿ, ಸಾಂಸಾರಿಕ ವಸ್ತುಗಳಿಂದ ಕೂಡಿ ಇವರ ಕತೆ ಜನ ಮನಸ್ಸನ್ನು ಗೆದ್ದಿದೆ. ಸಮಾಜ ಹಾಕಿದ ಸಂಪ್ರದಾಯದ ಚೌಕಟ್ಟನ್ನು ಮೀರಿ ಹೊರ ಬಂದ ಪಾತ್ರಗಳನ್ನು ಇವರು ಚಿತ್ರಿಸಿಲ್ಲ ಅವರ ಕವನಗಳಲ್ಲಿ ಲೇಖಕಿಯ ಆಧ್ಯಾತ್ಮಿಕ ಒಲವನ್ನು ಕಾಣಬಹುದು. ಇವರು ಆಂಗ್ಲ ಭಾಷೆಯಲ್ಲಿಯೂ ಸಾಹಿತ್ಯ ರಚನೆ ಮಾಡುತ್ತಿದ್ದರು.

**ಲೀಲಾ ಕಾರಂತ|:-( ೧೯೨೦ - ೧೯೬೮ ) :-**

ಸಾಹಿತ್ಯ ಜಗತ್ತಿನ ದಿಗ್ಗಜ ಶಿವರಾಮ ಕಾರಂತರ ಪತ್ನಿ, ಪತಿಯಂತೆ ಸಾಹಿತ್ಯ ರಚನೆಯಲ್ಲಿ ಆಸಕ್ತರು, ಕಲಾವಂತಿಕೆ ಸರಳತೆ, ಸೌಜನ್ಯ, ಗಾಂಭೀರ್ಯಗಳನ್ನು ಹೊಂದಿದ ವ್ಯಕ್ತಿತ್ವಇವರದ್ದು ಇವರು ಬರೆದದ್ದು ಕಡಿಮೆ ತಮ್ಮ ಲವಲವಿಕೆಯ ಕಾಲದಲ್ಲಿ 'ನಾ ಕಂಡ ಕಾರಂತ' ಎಂಬ ಲೇಖನವನ್ನು ಬರೆದಿದ್ದಾರೆ.

**ಶಾರದ ಶಾಸ್ತ್ರಿ :-( ೧೯೨೫ ) :-**

ಸಂಪ್ರದಾಯಸ್ತ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಇವರು ತಮ್ಮನ್ನು ಬರವಣಿಗೆಯಲ್ಲಿ ತೊಡಗಿಸಿಕೊಂಡದು ಸುಮಾರು ನಲವತ್ತು ವರುಷದಲ್ಲಿ, ಇದಕ್ಕೆ ಕಾರಣ ಅಂದಿನ ಕಟ್ಟುಪಾಡಿನ ಸಮಾಜ ವ್ಯವಸ್ಥೆ, ಪರಿಸರ ಅವಿಭಕ್ತ ಕುಂಟುಂಬ, ಇಷ್ಟಾ ನಿಷ್ಟೆಗಳಂತೆ ಬದುಕಲು ದೊರಕದ ಸ್ವಾತಂತ್ರ್ಯ ಇವರು ಸುಮಾರು ೧೯

ನಾಟಕಗಳನ್ನು ಬರೆದಿದ್ದಾರೆ ಹಾಗೂ ಈ ನಾಟಕವನ್ನು ಅವರೇ ನಿರ್ದೇಶಿಸಿದ್ದಾರೆ. ಅದನ್ನು ರಂಗ ಪ್ರಯೋಗಕ್ಕೆ ತಂದ ಯಶಸ್ವಿಯೂ ಇವರದ್ದಾಗಿದೆ.

ಲಲಿತಾ ರೈ|:- ( ೧೯೨೮ ) :-

ಸಂತ ಆಗ್ನೇಸ್ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಗೈಯುತ್ತಿದ ಲಲಿತಾ ರವರೂ ಕಡೆಂಗೋಡ್ಲು ಶಂಕರ ಭಟ್ಟ ಶಿಷ್ಯೆಯಾಗಿದ್ದರು ಓದಿನಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ್ದ ಇವರು ಕಡೆಂಗೋಡ್ಲು ಶಂಕರ ಭಟ್ಟ ಸಂಪಾದಕರಾಗಿದ್ದ 'ರಾಷ್ಟ್ರ ಬಂಧು ' ಪತ್ರಿಕಾ ಕಛೇರಿಗೆ ಆಗಾಗ ಧಾಳಿ ಇಡುತ್ತಿದ್ದರು. ಲಲಿತಾರಲ್ಲಿಯ ಉತ್ಸುಕತೆಯನ್ನು ಗಮನಿಸಿದ ಕಡೆಂಗೋಡ್ಲು ಪತ್ರಿಕಾ ಸುದ್ದಿಗಳನ್ನು ಅನುವಾದ ಮಾಡಲು ಲಲಿತಾರಿಗೆ ಕೊಡುತ್ತಿದ್ದೆ ಮುಂದೆ ಇದೇ ಹವ್ಯಾಸ ಅವರಿಗೆ ಸಾಹಿತ್ಯ ರಚನೆಗೆ ಪ್ರೇರಕವಾಯಿತು ಬರೆದದ್ದು ಸಲ್ಪವಾದರು ಆ ಕಾಲ ಘಟ್ಟದಲ್ಲಿ ಮಹತ್ವದ್ದೆನಿಸಿಕೊಳ್ಳುತ್ತದೆ.

ಹತ್ತೊಂಬತ್ತನೆಯ ಶತಮಾನದ ಆರಂಭದಿಂದ ಅಂತ್ಯದವರೆಗಿನ ಆ ಅವಧಿಯಲ್ಲಿ ಬಂದ ಮಹಿಳಾ ಸಾಹಿತ್ಯವನ್ನು ಸ್ಥೂಲವಾಗಿ ಗಮನಿಸಿದಾಗ ಮಹಿಳಾ ಕಾವ್ಯದ ಅಭಿವ್ಯಕ್ತಿಯಲ್ಲಿ ದೈವಿಕ ಅನ್ವೇಷಣೆಗಳು, ಹುಡುಕಾಟಗಳು ಇರಬೇಕೆಂದು ತಿಳುವಳಿಕೆ ಇದೆ. ಸಾಹಿತ್ಯವಸ್ತು, ದೇವರು, ಭಕ್ತಿ, ನಿಸರ್ಗ ಇವುಗಳೇ ಮುಖ್ಯವಾಗಿರುತ್ತದೆ. ಸಾಮಾಜಿಕ ಬದುಕಿನ ನಿತ್ಯ ಸಂಘರ್ಷಗಳು, ತಾಕಲಾಟಗಳು ಕಾವ್ಯದಲ್ಲಿ ಕಾಣಿಸಬೇಕೆಂಬ ಗಮನವಿಲ್ಲ ಅದರಲ್ಲಿ ಆಸಕ್ತಿಯೂ ಇರುವಂತೆ ತೋರುವುದಿಲ್ಲ.

ಒಟ್ಟಿನಲ್ಲಿ ಈ ಕಾಲ ಘಟ್ಟದಲ್ಲಿ ಕಾವ್ಯ ರಚಿಸಿದ ಮಹಿಳೆಯರು ಪ್ರಚಾರತೆಯನ್ನು ಪಡೆದಿರುವುದು ಕಡಿಮೆಯೆಂದೇ ಹೇಳಬೇಕು. ಕಡೆಗಣಿಸಲ್ಪಟ್ಟ ಅಜ್ಞಾತವಾಗಿ ಉಳಿದಿರುವ ಅವರ ಬರಹಗಳು ಇತ್ತೀಚೆಗೆ ಪ್ರಕಟವಾಗುತಿವೆಯಷ್ಟೇ. ಇವರ ಸಾಹಿತ್ಯವೆಲ್ಲವೂ ಧರ್ಮವನ್ನು ಪ್ರಧಾನವಾಗಿ ಬಿಂಬಿಸುವುದಾಗಿದೆ. ಇವರು ಹೊರಗಿನ ಪ್ರಂಚವನ್ನು ಗಮನಿಸಿದಷ್ಟು ತಮ್ಮ ಸಾಹಿತ್ಯವನ್ನು ಬಿಂಬಿಸುತ್ತಾ ಪ್ರತಿಕ್ರಿಯೆಯನ್ನು ಅಭಿವ್ಯಕ್ತಿಸಿದ್ದಾರೆ.

ಕಾವ್ಯ ರಚಿಸಿದವರ ಸಂಖ್ಯೆ ಬಹಳ ಕಡಿಮೆ ಸಂಗ್ರಹ ಶೀಲತೆ ಅನುಭವಗಳ ಆಯ್ಕೆ, ನಿರೂಪಣೆಯ ಸಾಮರ್ಥ್ಯ, ಕಾವ್ಯದ ಪರಿಕರಗಳಾದ ಸಂಕೇತ, ಪ್ರತಿಮೆ, ಉಪಮೆ, ರೂಪಕಗಳು ನಿರ್ಮಾಣದ ಕಡೆಗೆ ಹೆಚ್ಚು ಗಮನ ಹರಿಸಿದ ಬಗ್ಗೆ ಕಾಣುವುದಿಲ್ಲ. ಬಹಳ ಸಂದರ್ಭಗಳಲ್ಲಿ ಹೇಳಿಕೆಯ ರೂಪಗಳಲ್ಲೇ ನಿಂತು ಬಿಡುತ್ತದೆ. ಕಾವ್ಯ ರಚಿಸುವಾಗ ಅದು ನೀತಿ ಬೋದಕವಾಗಿದ್ದು, ಉಪದೇಶಗಳನ್ನು ಮಾಡುವಂತಿರಬೇಕೆಂದು ನಂಬಿರುವಂತಿದೆ.ಸೂಕ್ಷ್ಮ ಸಂವೇದನಗಳಿಲ್ಲ ಹೇಳಬೇಕೆಂದೆನಿಸಿರುವುದನನ್ನು ವಾಚ್ಯಾರ್ಥದಲ್ಲೆ ಹೇಳಿ ಮುಗಿಸಿರುವುದನ್ನು ಗಮನಿಸಬಹುದು.

ಕೆಲವು ಲೇಖಕಿಯರು ಅರವತ್ತು, ಎಪ್ಪತ್ತರ ದಶಕದಲ್ಲೂ ಕಾವ್ಯ ರಚಿಸುವಾಗ ಆಗುತ್ತಿರುವ ಬದಲಾವಣೆಗಳತ್ತ ಅಂದರೆ ಪ್ರಗತಿಶೀಲ ನವ್ಯ ಸಾಹಿತ್ಯದತ್ತ ಗಮನಹರಿಸದೆ ನವೋದಯದ ಸುಂದರ ಕಲ್ಪನೆ, ಭಾವನೆಗಳಲ್ಲೆ ಮುಳುಗಿರುವುದನ್ನು ಕಾಣುತ್ತೇವೆ. ಮೊದಲ ತಲೆ ಮಾರಿನ ಲೇಖಕಿಯರು ಪ್ರಕಟಿಸಿದ ಸಾಮಾಜಿಕ ಕಳಕಳಿ, ವೈಚಾರಿಕ ಎಚ್ಚರವನ್ನು ಇವರು ಪ್ರಕಟಿಸದೇ ಇರುವುದನ್ನು ಗಮನಿಸಬಹುದು.

ಮಹಿಳೆಯರ ಬರಹಗಳನ್ನು ಗಮನಿಸಿದಾಗ ನೂರಾರು ಸಂಖ್ಯೆಯಲ್ಲಿ ಲೇಖಕಿಯರು ಕಾಣಿಸಿಕೊಂಡರೂ ಪ್ರಧಾನ ಸಾಹಿತ್ಯ ಚರಿತ್ರೆಯಲ್ಲಿ ಅವರು ಹೇಳ ಹೆಸರಿಲ್ಲದವರಾಗಿದ್ದಾರೆ , ಅಜ್ಞಾತರಾಗಿಯೇ ಉಳಿದಿದ್ದಾರೆ. ಇದಕ್ಕೆ ಕಾರಣ ಏನು ಎಂಬುದು ಅವರ ಸಾಹಿತ್ಯಾವಲೋಕಿಸಿದಾಗ ಮಾತ್ರ ತಿಳಿಯಬಹುದಾಗಿದೆ.

೨೦ನೆಯ ಶತಮಾನದ ಆದಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಹಿಳಾ ಸಾಹಿತ್ಯವನ್ನು ರಾಧಮ್ಮನವರು ಬದುಕಿದ್ದ ಕಾಲಘಟ್ಟದಲ್ಲಿ ಒಟ್ಟಾಗಿ ಗಮನಿಸಿದಾಗ ಭಜನೆ, ಸ್ತೋತ್ರ, ಕೀರ್ತನೆ, ದೇವತಾಸ್ತುತಿಗಳು, ಸಣ್ಣಕತೆ , ಲೇಖನ, ಪ್ರಬಂಧ ಹೀಗೆ ವಿವಿಧ ಸಾಹಿತ್ಯ ಪ್ರಕಾರಗಳನ್ನು ಕಾಣುತ್ತೇವೆ. ಕವಯತ್ರಿ ರಾಧಮ್ಮನವರು ಧಾರ್ಮಿಕ ಕಾವ್ಯವನ್ನು, ನೀತಿ ಬೋಧಕ ಕಿರು ಕಾವ್ಯಗಳನ್ನು, ಮಾತ್ರವಲ್ಲದೆ ಮಹಾಕಾವ್ಯವನ್ನು ರಚಿಸಿದ ಏಕೈಕ ಕವಯತ್ರಿಯು ಆಗಿದ್ದಾರೆ, ಆ ಕಾರಣಕ್ಕಾಗಿ ಅವರು ಪ್ರಮುಖ ಸ್ಥಾನವನ್ನು ಹೊಂದುವರು.

**ಟಿಪ್ಪಣಿಗಳು :-**

೧. ಸಂತೋಷ ಚೊಕ್ಕಾಡಿ, ದಕ್ಷಿಣ ಕನ್ನಡ ಕಾವ್ಯದ ವಿಭಿನ್ನ ನೆಲೆಗಳು ,ಪೀಠಿಕೆ.

೨. ಅದೇ, ಪು.೫

೩. ಅದೇ, ಪು.೧೩

೪. ಅದೇ, ಪು.೧೭

೫. ಕಮಲಾಹಂಪನಾ, ಬೊಗಸೆ, ಪುಟ ೨೭೭

೬. ಅದೇ, ಪುಟ ೨೮೧

೭. ಅದೇ, ಪುಟ ೨೮೨

೮. ಎಚ್. ಎಸ್. ಶ್ರೀಮತಿ ( ಸಂ ), ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪುಟ ೩೭.

೯. ಅದೇ, ಪುಟ ೩೮.

೧೦. ಬಿ. ವಿ. ಮಲ್ಲಾಪುರ ( ಸಂ ), ಅಲ್ಲಮ ಪ್ರಭುದೇವರ ವಚನ ಸಂಪುಟ, ವ ೧೬೮.

# ೩. ಜೈನ ಧರ್ಮ ಮತ್ತು ಮಹಿಳೆ

ಜೈನ ಧರ್ಮ ಭಾರತದ ಪುರಾತನ ಧರ್ಮಗಳಲ್ಲೊಂದಾಗಿದೆ. ಮಾನವ ಜನ್ಮಕ್ಕೆ ಜೈನ ಧರ್ಮ ಕೊಟ್ಟಷ್ಟು ಪ್ರಾಶಸ್ತ್ಯವನ್ನು ನೀಡಿದೆ. ಜಗತ್ತಿನ ಮತ್ಯಾವ ಧರ್ಮವೂ ಕೊಟ್ಟಿಲ್ಲ. ಮಾನವನ ಮಾತಿರಲಿ ದೇವತೆಗಳೂ ಕೂಡ ಮುಕ್ತರಾಗಬೇಕಾದರೆ ಮಾನವರಾಗಿಯೇ ಹುಟ್ಟಬೇಕೆಂಬುದನ್ನು ಜೈನ ಧರ್ಮ ಸ್ಪಷ್ಟವಾಗಿ ಸಾರಿದೆ. ಮಾನವ ಮುಕ್ತಿಯ ಮೊದಲ ಮೆಟ್ಟಿಲೆಂಬುದನ್ನು ಈ ಧರ್ಮ ದೃಢವಾಗಿ ನಂಬಿದೆ. ತೀರ್ಥಂಕರನಾಗಬೇಕಾದರೂ ಆತನು ಮಾನವನ ಶರೀರದ ಮೂಲಕವೇ ಹಾಯಬೇಕು. ಹೀಗೆ ಮಾನವ ಜನ್ಮ ದೊಡ್ಡವೆಂದು ಲೋಕಕ್ಕೆ ಶ್ರುತಪಡಿಸಿದ ಈ ಜೈನ ಧರ್ಮದಲ್ಲಿ ಮಹಿಳೆಯರಿಗೆ ಕೊಟ್ಟಿರುವ ಸ್ಥಾನಮಾನಗಳು ಪರಿಭಾವನಾರ್ಹವಾದ ಗಹನ ವಿಚಾರವಾಗಿದೆ .

" ಜಿನ ಜನನಿಯರು ತಮ್ಮ ಚಿಕ್ಕಮಕ್ಕಳಾದ ತೀರ್ಥಂಕರನನ್ನು ತೊಡೆಯ ಮೇಲೆ ಕೂಡಿಸಿಕೊಂಡಿರುವ ಕಲ್ಲಿನ ವಿಗ್ರಹಗಳನ್ನು ದೇಶದ ಹಲವು ಕಡೆಗಳಲ್ಲಿ ಕಾಣಬಹುದು. ಇಂಥ ವಿಗ್ರಹಗಳನ್ನು ಪೂಜಿಸುವುದೂ ಉಂಟು. ಈಗಲೂ ಅಬು, ಗಿರಿವಾರ, ಪಾಟನ್ ಮೊದಲಾದ ಕೆಲವು ಸ್ಥಳಗಳಲ್ಲಿ ಈ ಜಿನ ಜನನಿಯರ ಮೂರ್ತಿಗಳಿಗೆ ವಿಶೇಷ ಪೂಜೆ ನಡೆಯುತ್ತದೆಂದು ತಿಳಿದು ಬರುತ್ತದೆ "[೧].

ಮೊದಲನೆ ತೀರ್ಥಂಕರನಾದ ಋಷಭದೇವನು ಗೃಹಸ್ಥನಾಗಿದ್ದ ಕಾಲದಲ್ಲಿ, ಅಕ್ಷರಗಳನ್ನು ಗಣಿತವನ್ನು ಹೇಳಿ ಕೊಟ್ಟನಂತೆ. ಇಬ್ಬರೂ ಹೆಣ್ಣು ಮಕ್ಕಳನ್ನು ಕರೆದು ತೊಡೆಯ ಮೇಲೆ ಕುಳ್ಳರಿಸಿಕೊಂಡು ತನ್ನ ಎರಡು ಕೈಗಳಿಂದಲೂ ಅಕ್ಷರ ಮಾಲಿಕೆಯನ್ನು ಬರೆದು, ಆ ಮಕ್ಕಳಿಗೆ ಲಿಪಿಯನ್ನೂ, ಒಂದು ಎರಡು ಮೊದಲಾದ ಅಂಕಿಗಳಿಂದ, ಕ್ರಮವಾಗಿ ಸಂಖ್ಯಾ ಸಾಧನವನ್ನೂ ಉಪದೇಶ ಮಾಡಿದನು. " ಹೀಗೆ ಗುರುವಿನ ಅನುಗ್ರಹದಿಂದ ವಿದ್ಯೆಗಳನ್ನು ವಿಶೇಷವಾಗಿ ವಶಪಡಿಸಿಕೊಂಡು ಈ ಇಬ್ಬರು ಕನ್ಯೆಯರೂ ಸರಸ್ವತಿಯ ಅವತಾರಕ್ಕೆ ಯೋಗ್ಯತೆಯನ್ನು ಪಡೆದರು. ಹೀಗೆ ಋಷಭದೇವನು ತನ್ನ ನಲ್ಮೆಯ ಪುತ್ರಿಯರಾದ ಬ್ರಾಹ್ಮಿ ಮತ್ತು ಸುಂದರಿಯರಿಗೆ ಮೊದಲು ಲೌಕಿಕವಿದ್ಯೆಯನ್ನು ಹೇಳಿಕೊಡುತ್ತಾನೆ. ಇದು ಆದಿ ತೀರ್ಥಂಕರನು ಹೆಣ್ಣಿಗೆ ಕೊಟ್ಟ ಪ್ರಥಮ ಸ್ಥಾನ "[೨].

ಲೌಕಿಕವಾದ ವಿದ್ಯೆಗಳಲ್ಲಿ ಮಾತ್ರವಲ್ಲದೆ ಪಾರಲೌಕಿಕವಾದ ವಿದ್ಯೆಗಳಲ್ಲಿಯೂ, ಸ್ತ್ರೀಗೆ ಪುರುಷನಂತೆಯೇ ಗಣ್ಯವಾದ ಸ್ಥಾನವುಂಟು ಎಂಬುದನ್ನು ತೀರ್ಥಂಕರನ ' ಸಮವಸರಣ ' ಎಂಬ ಧರ್ಮಸಭೆಯ ವರ್ಣನೆಯಿಂದ ತಿಳಿಯಬಹುದು . |" ಜೈನಧರ್ಮದಲ್ಲಿ ವಿದ್ಯೆಗೆ ಬಹಳ ಪ್ರಮುಖವಾದ ಸ್ಥಾನವನ್ನು ಕೊಡುತ್ತಾರೆ . ಜೈನ ದಿಗಂಬರ ಮಹಾಪುರಾಣ ಮಾನ್ಯವಾದ ಪ್ರಮಾಣಗ್ರಂಥ ಅದರ ಆಧಾರದಿಂದ ಪುರುಷರಿಗೆ ಹೇಗೊ ಹಾಗೆಯೇ ಸ್ತ್ರೀಯರಿಗೆ ಲೌಕಿಕ ವಿದ್ಯಾಭ್ಯಾಸವು ಅಗತ್ಯಯೆಂಬುದನ್ನು ಕಾಣಬಹುದು. ಲೌಕಿಕ ವಿದ್ಯೆಗಳಿಗಿಂತಲೂ ಆಧ್ಯಾತ್ಮಿಕ ವಿದ್ಯೆಗಳಿಗೆ ಜೈನ ಧರ್ಮವು ಹೆಚ್ಚು ಪ್ರಾಶಸ್ತ್ಯ ನೀಡಿತು. ಬಸದಿ ಮತ್ತು ಮಠಗಳೇ ಜೈನಮತೀಯರ ಮುಖ್ಯ ವಿದ್ಯಾಕೇಂದ್ರಗಳಾಗಿದ್ದವೆನ್ನಬಹುದು. ಜೈನ ಮತಿಗಳ ವಾಸ ಸ್ಥಾನವೂ ಇದು ಆಗಿತ್ತು ಶಾಸ್ತ್ರ ದಾನ, ಶಾಸ್ತ್ರಗ್ರಂಥಗಳ ರಚನೆಗಳು ಬಸದಿಗಳಲ್ಲಿಯೇ ನಡೆಯುವುದರಿಂದ ಜೈನ ಗ್ರಂಥ ಭಂಡಾರಗಳು ಬಸದಿಯಲ್ಲಿ ಸ್ಥಾಪಿತಗೊಂಡವು. ಜೈನರು ಧಾರ್ಮಿಕ ಶಿಕ್ಷಣವನ್ನು ನೀಡುವಲ್ಲಿ ಪ್ರಧಾನ ಪಾತ್ರವನ್ನು ವಹಿಸುವರು ಜೈನಮಠಗಳಲ್ಲಿದ್ದುಕೊಂಡು ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡುತ್ತಿದ್ದ ಗುರುಗಳು ವಿವಿಧ ವಿಷಯಗಳಲ್ಲಿ ಪಾರಂಗತರಾಗಿರುತ್ತಿದ್ದರು. ಇದರಲ್ಲಿ ತ್ರೈವಿದ್ಯೆಗಳಲ್ಲಿ ಪಾರಂಗತರಾಗಿದ್ದ ಹಲವರ ಉಲ್ಲೇಖವನ್ನು ಶಾಸನಗಳಲ್ಲಿ ಕಾಣಬಹುದು. ನೀಡಲಾಗುತ್ತಿದ್ದ

ವಿದ್ಯಾಭ್ಯಾಸದ ವೈವಿಧ್ಯ ಮಯವಾದ ಸುಂದರ ಚಿತ್ರಗಳನ್ನು ಕಾವ್ಯ, ಶಾಸನ ಮುಂತಾದ ಮಾಧ್ಯಮಗಳಲ್ಲಿ ಕಾಣಬಹುದು |" [೩].

ದುರದೃಷ್ಟವೇನೆಂದರೆ ಇಂತಹ ಪಾಂಡಿತ್ಯದಿಂದ ಕೂಡಿರುವ ವಿದ್ಯಾಭ್ಯಾಸದಿಂದ ಸ್ತ್ರೀಯರು ವಂಚಿತರು, ಜೈನ ಸಮಾಜದಲ್ಲಿ ಸ್ತ್ರೀಯರ ವಿದ್ಯಾಭ್ಯಾಸದ ಬಗ್ಗೆ ಮಾಹಿತಿ ಎಲ್ಲಿಯೂ ದೊರೆಯುವುದಿಲ್ಲ. ಹೆಣ್ಣು ಮಕ್ಕಳು ಎಂಟು ಅಥವಾ ಹತ್ತು ವರ್ಷಗಳ  ವಯಸ್ಸಿನಲ್ಲಿಯೇ ವಿವಾಹ ಬಂಧನಕ್ಕೆ ಒಳಗಾಗುವ ರೂಢಿಯಿಂದ ಅವರ ವಿದ್ಯಾಭ್ಯಾಸವನ್ನು ಸಂಪೂರ್ಣ ವಾಗಿ ಕಡೆಗಣಿಸಲಾಗಿತ್ತು . ಪುರುಷಪ್ರಧಾನ ಸಮಾಜವು, ಉತ್ತಮ ವಿದ್ಯಾಭ್ಯಾಸಕ್ಕೆ ಸ್ತ್ರೀಯರು ಅನರ್ಹರು ಎಂಬ ಉಪೇಕ್ಷೆಯ ಮನೋಭಾವನೆಯನ್ನು ತಳೆದಿತ್ತು. ಈ ಪ್ರವತ್ತಿಯು ಎಲ್ಲಾ ಕಡೆ ಇದೆ ಆದರೆ ಪರಿಸ್ಥಿತಿ ಹೀಗಿದ್ದರು ತುಳುನಾಡಿನ ಅರಸುಮನೆತನದ ಕುಲೀನ ಸ್ತ್ರೀಯರು, ಅಧಿಕಾರೀವರ್ಗದ ಸ್ತ್ರೀಯರು, ಶ್ರೀಮಂತರು, ಶ್ರೀಮಂತರು ದೊಡ್ಡ ಮನೆತನದವರು ಸ್ತ್ರೀಯರಿಗೆ ಮನೆಯಲ್ಲಿ ಧಾರ್ಮಿಕ ವಿದ್ಯಾಭ್ಯಾಸದ ಅವಕಾಶವನ್ನು ಕಲ್ಪಿಸಿದ್ದರು. ಶಾಸ್ತ್ರ ಪುರಾಣಗ್ರಂಥಗಳ  ವಾಚನ, ನೋಂಪಿನ ವ್ರತಪಾಲನೆಯಲ್ಲಿ ಸ್ತ್ರೀಯರು ಪಾಲ್ಗೋಳ್ಳುತ್ತಿದ್ದುದರಿಂದ, ಓದು ಬರಹವು ಅವರಿಗೆ ಅಗತ್ಯವಾಗಿ ಬೇಕಿತ್ತು.

" ಜೈನ ಪುರಾಣದಲ್ಲಿ ಆದಿದೇವನು ತನ್ನ ಮಕ್ಕಳಾದ ಬ್ರಾಹ್ಮೀ ಮತ್ತು ಸುಂದರಿಯರಿಗೆ ವಿದ್ಯಾಭ್ಯಾಸವನ್ನು ಹೇಳಿ ಕೊಟ್ಟನೆಂಬ ವಿವರಗಳಿರುವುದನ್ನು ನಾವು ಕಾಣಬಹುದು " [೪] .ಸ್ತ್ರೀಯರ ವಿದ್ಯಾಭ್ಯಾಸದ ವಿಷಯದಲ್ಲಿ ಇತರರಿಗಿಂತ ಹೆಚ್ಚು ಉದಾರತೆಯನ್ನು ಜೈನಮತವು ತೋರಿಸಿತು ಎಂದೆನ್ನಬಹುದು. ಇಲ್ಲಿಯ ಪುಣ್ಯ ವ್ರತಗಳನ್ನು ಹೆಚ್ಚಾಗಿ ಸ್ತ್ರೀಯರೇ ಮಾಡುವುದರಿಂದ, ಅವರು ನೋಂಪಿ ಕತೆಯನ್ನು ಓದುವುದಕ್ಕು ಮಂತ್ರಗಳನ್ನು ಹೇಳುವುದಕ್ಕೆ ವಿದ್ಯಾಭ್ಯಾಸವು ತೀರ ಅಗತ್ಯವೂ ಆಗಿದೆ. ಅನೇಕ ಕವಿಗಳು ಸ್ತ್ರೀಯರು ವಿದ್ಯಾಭ್ಯಾಸಕ್ಕಿಂತ ಲಲಿತಕಲೆಗಳಲ್ಲಿ ಆಸಕ್ತರಾಗಿದ್ದರು ಎಂದು ತಿಳಿಸುತ್ತಾರೆ.

ಕರ್ನಾಟಕದಲ್ಲಿ ಹೆಣ್ಣು ಸಾವಿರಾರು ವರುಷಗಳ ಪರಂಪರೆಯಲ್ಲಿ ನಡೆದು ಬಂದಿದ್ದಾಳೆ. ರಾಜಕೀಯ ಧಾರ್ಮಿಕ, ಸಾಂಸ್ಕೃತಿಕ ಪರಿಸ್ಥಿತಿಗಳಿಗೆ  ಸ್ಪಂದಿಸಿ ಕನ್ನಡ ಮಹಿಳೆ ಬೆಳೆದು ನಿಂತಿದ್ದಾಳೆ. ಅವಳು ಎದುರಿಸಿದ ಸಂಕಷ್ಟಗಳು ಕಡಿಮೆಯೇನಲ್ಲ ಪುರುಷ ಪ್ರಧಾನ ಸಮಾಜದಲ್ಲಿ ಶೋಷಣೆಗೆ ಒಳಗಾಗಿ ಆರ್ಥಿಕವಾದ ಸ್ವಾತಂತ್ರ್ಯವೂ ಇಲ್ಲದೆ ನಲುಗಿದ್ದಾಳೆ ಕರ್ನಾಟಕದ ಸಂಸ್ಕೃತಿಗೆ  ಕನ್ನಡ ಮಹಿಳೆಯರ ಕೊಡುಗೆಯು ಅಪಾರವಾಗಿದೆ.

" ಜೈನ ಧರ್ಮದಲ್ಲಿ ಹಿಂದಿನಿಂದಲೂ ಮಹಿಳೆಯರಿಗೆ ವಿಶೇಷವಾದ ಸ್ಥಾನವನ್ನು ಹೆಚ್ಚಿನ ಗೌರವವನ್ನು ಕೊಟ್ಟಿರುವುದು ಕಂಡು ಬರುತ್ತದೆ. ಬೆಂಕಿ, ಲೂಟಿ, ಆಕಸ್ಮಿಕ ಮತ್ತು ದರೋಡೆ ಮುಂತಾದ ಸಂದರ್ಭಗಳಲ್ಲಿ ಮೊತ್ತ ಮೊದಲು ಮಹಿಳೆಯರನ್ನು ರಕ್ಷಿಸಬೇಕೆಂದು ಜೈನ ಧರ್ಮ ಗ್ರಂಥಗಳಲ್ಲಿ ಹೇಳಲಾಗಿದೆ. ತೀರ್ಥಂಕರರ ಜನನಿಯರನ್ನು ಹಲವು ಕಡೆ ಪೂಜಿಸುವುದನ್ನು ಕಾಣಬಹುದು " [೫].

ಶೈಕ್ಷಣಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಆಡಳಿತಾತ್ಮಕ, ಆಧಾತ್ಮಿಕ, ಜ್ಞಾನ ಕಾರ್ಯವಲಯಗಳಲ್ಲಿ ಜೈನ ಸ್ತ್ರೀಯರು ಕ್ರಿಯಾಶೀಲರಾಗಿದ್ದರು. ರಾಜಕೀಯ ರಂಗದಲ್ಲೂ ಗಣನೀಯ ಸಾಧನೆಯನ್ನು ಗೈದು, ಪುರುಷರಿಗೆ ಆಧಾರವಾಗಿದ್ದು ಪ್ರಾಮುಖ್ಯತೆಯನ್ನು ಪಡೆದ ಮಹಿಳೆಯರ ಜೀವನ ವಿವರಗಳು ಸಿಗುವುದು. ಜೈನ ಮಹಿಳೆಯರು ಸಾವಿಗಂಜದೆ ನಗುನಗುತ್ತಾ ಸಾವನ್ನದುರಿಸಿದ ಸಾಧ್ವೀಯರ ಚಿತ್ರಣ ಶಾಸನಗಳಲ್ಲಿ

ಕಾಣುತ್ತೇವೆ. |" ಜೈನ ಧರ್ಮದಲ್ಲಿ ನಿರೂಪಿತನಾದ ಸಲ್ಲೇಖನ ವ್ರತ ಕೈಗೊಂಡು ತೃಣ ಸಮಾನವಾಗಿ ಕಾಯ ದೇಹ ತ್ಯಾಗ ಮಾಡಿದವರ ನೆನಪಿಗಾಗಿ ನಿಸಿಧಿಗಲ್ಲುಗಳು ಕನ್ನಡ ನಾಡಿನ ಎಲ್ಲೆಡೆಯಲ್ಲಿಯೂ ಸಾವಿರಾರು ದೊರೆತಿದೆ |" ೪.

" ಜೈನ ಸ್ತ್ರೀಯರು ಸಾಮಾಜಿಕ ಚಟುವಟಿಕೆಗಳಲ್ಲಿ ಪಾಲ್ಗೊಂಡಿದುದಕ್ಕೆ ಶಾಸನಗಳು ಸಾಕ್ಷಿ ಹೇಳುತ್ತದೆ. ಜೈನ ಸನ್ಯಾಸಿನಿಯರನ್ನು ಕಂತಿ, ಆರ್ಯಿಕೆ, ಆಜ್ಜಿಕೆ, ಆಜ್ಜಿ, ಸನ್ಯಾಸಿನಿ, ಪರಿವ್ರಾಜಿಕೆ ಎಂಬ ನಾನಾ ಪರ್ಯಾಯ ಶಬ್ದಗಳಿಂದ ಕರೆದಿದ್ದಾರೆ. ಆದರೆ ಪ್ರಚಲಿತದಲ್ಲಿರುವುದು ಕಂತಿ ಆಜ್ಜಿಕೆ ಎಂಬುದು ಮಾತ್ರ. ಜೈನ ಕಂತಿಯರಲ್ಲಿ ವಿದ್ಯೆ, ಬುದ್ಧಿವಂತಿಕೆ, ಪಾಂಡಿತ್ಯ, ಶೀಲ, ಸಂವರ್ಧನೆ, ತ್ಯಾಗ ಮೊದಲಾದ ಉದಾತ್ತ ಗುಣಗಳಿಂದ ಶೋಭಿತರಾದ ಎಷ್ಟೋ ಕಂತಿಯರ ವಿವರ ನಮಗೆ ಸಿಗುತ್ತದೆ. ಕ್ರಿ. ಶ ೭೦೦ ರಲ್ಲಿ ರಚಿತವಾದ ಶ್ರವಣ ಬೆಳಗೊಳದ ಶಾಸನ ೨೬ ರಲ್ಲಿ ಸಸಿಮತಿ ಗಂತಿಯರು ಮೂಡಿಸಿದ ವಿವರ ಹೀಗೆ ವರ್ಣಿತವಾಗಿದೆ.

ನಱದಾದ ವ್ರತಶೀಲ ನೋಂಪಿ ಗುಣದಿಂ ಸ್ವಾಧ್ಯಾಯ ಸಂಪತ್ತಿನಿಂ
ಕಱಯಲ್ ನಲ್‌ತಪ ಧರ್ಮದಾ ಸಸಿಮತಿ ಶ್ರೀ ಗಂತಿಯರ್ ವಂದು ಮೇಲ್
ಅಱ ದಾಯುಷ್ಯ ಮನೆಂತು ನೋಡನೆಗೆ ತಾನಿಂತೆಂದು ಕಟ್ಟಪ್ಪಿನೊಳ್
ತೊಱಧಾರಾದನೆನೋಂತು ತೀರ್ಥಗಿರಿ ಮೇಲ್ ಸ್ವರ್ಗಾಲಯಕ್ಕೇಱದಾರ್ ||

ಅಂತೆಯೇ ಕಂತಿಯರ ಪ್ರಭಾವದಿಂದ ಅನೇಕ ಸ್ತ್ರೀಯರು ಪುರುಷರು ಸನ್ಯಾಸತ್ವ ಸ್ವೀಕರಿಸಿ ದೀಕ್ಷೆ ಪಡೆದ ನಿದರ್ಶನಗಳಿವೆ. ಸನ್ಯಾಸದ ದೀಕ್ಷೆ ಪಡೆದ ಈ ಸ್ತ್ರೀಯರು ತಮ್ಮ ಧ್ಯಾನ, ತಪ ಜಪ ವಿದ್ವತ್ತಿನಿಂದ ಕಠಿಣತರ ಬದುಕನ್ನು ನಡೆಸಿ ವಿಖ್ಯಾತರಾಗಿದ್ದಾರೆ " ೬.

ಕಂತಿಯರಷ್ಟೇ ಜೈನ ಧರ್ಮದ ಮೇಲೆ ಪ್ರಭಾವ ಬೀರಿದ ಮತ್ತೊಂದು ಸ್ತ್ರೀ ವರ್ಗವೆಂದರೆ ಜೈನ ಶ್ರಾವಕಿಯರದು ಸಮಾಜದ ಎಲ್ಲ ವರ್ಗದ ಮಹಿಳೆಯರು ಧರ್ಮ ಕಾರ್ಯಾಚರಣೆಗಳಲ್ಲಿ ಭಾಗಿಯಾಗುತ್ತಿದ್ದು ತಮ್ಮ ಯೋಗ್ಯತೆಗನುಸಾರವಾಗಿ ದಾನ ಧರ್ಮ ಮಾಡಿದ ನಿದರ್ಶನಗಳು ಸಾಕಷ್ಟು ದೊರೆತಿದೆ. ಪ್ರಭು ವರ್ಗದ, ಉನ್ನತ ವರ್ಗದ ಮಹಿಳೆಯರು ಬಸದಿ ನಿರ್ಮಾಣ ಮುಂತಾದ ಕೆಲಸದಲ್ಲಿ ನಿರತರಾದರೆ ಸಾಮಾನ್ಯ ವರ್ಗದ ಮಹಿಳೆಯರು ಪೂಜಾ ವಿಧಾನಕ್ಕೆ ಅಗತ್ಯವಾದ ಕಾರ್ಯದಲ್ಲಿ ಕೊಡುಗೈ ದಾನಿಗಳಾದವರು ಉಳಿದ ಎಲ್ಲ ಧರ್ಮಗಳಿಗಿಂತ ಜೈನ ಧರ್ಮ ಸ್ತ್ರೀಯರಿಂದ ಹೆಚ್ಚಾಗಿಯೇ ಉಪಕೃತವಾಗಿದೆ ." ಪೋಚಿಕಬ್ಬೆ ಎನ್ನುವವಳು ತನ್ನ ಸಮಸ್ತವನ್ನೂ ಜೈನ ಧರ್ಮಕ್ಕೆ ಮೀಸಲಿಟ್ಟು ಹಲವಾರು ಚೈತ್ಯಾಲಯಗಳನ್ನು ಮಾಡಿಸಿದಳು. ಅವಳ ಸಲ್ಲೇಖನ ವ್ರತವನ್ನು ನಿರೂಪಿಸುವುದು. ರೋಮಂಚನವನ್ನು ತರುತ್ತದೆಂದು ಶಾಸನವು ವರ್ಣಿಸುತ್ತದೆ. ಹಲವಾರು ಬಹು ಉದಾರ ಬುದ್ದಿಯುಳ್ಳವರಾಗಿದ್ದರು. ಚಾಗಲದೇವಿ ಎಂಬಾಕೆಯ ಸ್ವತಃ ಜೈನಳಾಗಿದ್ದರೂ ಬಳ್ಳಿ ಗಾವಿಯಲ್ಲಿ ಚಾಗೇಶ್ವರವೆಂಬ ದೇವಾಲಯವನ್ನು ಕಟ್ಟಿಸಿ ಹಲವಾರು ಬ್ರಾಹ್ಮಣರಿಗೆ ಕನ್ಯಾದಾನ ಮೊದಲಾದ ದಾನಗಳನ್ನು

ಮಾಡಿದಳೆಂದು ತಿಳಿಯುತ್ತದೆ . ಬಸದಿ, ಕೆರೆ, ಕಟ್ಟೆ, ಕಲ್ಯಾಣಿಗಳನ್ನು ಕಟ್ಟಿಸುವುದು. ಅಥವಾಜೀರ್ಣೋದ್ಧಾರ ಮಾಡುವುದು, ಕವಿಗಳಿಗೆ ಆಶ್ರಯವಿತ್ತು ಮಹಾ ಕಾವ್ಯ ಬರೆಸುವುದು, ಇಲ್ಲವೆ ಪ್ರತಿ ಮಾಡಿಸುವುದು ಜೈನ ಸ್ತ್ರೀಯರ ಅನುಕರಣೀಯ ಆದರ್ಶ ಗುಣವಾಗಿದೆ. ಹೀಗೆ ಜೈನ ಧರ್ಮ, ಜೈನ ಸಂಸ್ಕೃತಿ, ಜೈನ ಸಾಹಿತ್ಯ ಕಲೆಗಳಲ್ಲಿ ಜೈನ ಮಹಿಳೆಯರಿಗೆ ಮೊದಲಿನಿಂದಲೂ ಆಸಕ್ತಿ ಇರುವುದು ಕಾಣುತ್ತದೆ. ಇಂತಹ ಜೈನ ಮಹಿಳೆಯರನ್ನು ಮುಕ್ತ ಕಂಠದಿಂದ ಹೊಗಳಿರುವುದನ್ನು ಶಾಸನಗಳಲ್ಲಿ ಕಾಣುತ್ತೇವೆ "[೮].

ಜೈನ ಮಹಿಳೆಯರಲ್ಲಿ ಅತಿ ಎತ್ತರದ ಗಣ್ಯ ವ್ಯಕ್ತಿ ಅತ್ತಿಮಬ್ಬೆ ತನ್ನ ನಡೆ ನುಡಿಗಳಿಂದ ನಾಡಿನ ಪಡೆ ಮಾತಾದಳು ಹತ್ತನೆಯ ಶತಮಾನದ ಪೂರ್ವ ಭಾಗದಲ್ಲಿದ್ದ ಚಾಲುಕ್ಯ ಚಕ್ರವರ್ತಿ ಎರಡನೆಯ ತೈಲಪನಿಗೆ ದಂಡ ನಾಯಕನಾದ ಮಲ್ಲಪ್ಪಯ್ಯನಿಗೆ ಅತ್ತಿಮಬ್ಬೆ ಮತ್ತು ಗುಂಡಮಬ್ಬೆ ಎಂಬ ಇಬ್ಬರು ಹೆಣ್ಣು ಮಕ್ಕಳಿದ್ದರು. ಇವರನ್ನು ಚಾಲುಕ್ಯರ ಸೇನಾಧಿಪತಿಯಾಗಿದ್ದ ನಾಗದೇವನಿಗೆ ಕೊಟ್ಟು ಮದುವೆ ಮಾಡಿದನು. ಕಾಳಗವೊಂದರಲ್ಲಿ ಹೋರಾಡಿ ನಾಗದೇವ ಮರಣಿಸಿದಾಗ ಗುಂಡುಮಬ್ಬೆ ತನ್ನ ಪತಿಯೊಂದಿಗೆ ಸಹಗಮನ ಆಚರಿಸಿದಳು. ಅತ್ತಿಮಬ್ಬೆ ತನ್ನ ಮಗ ಅಣ್ಣಿಗ ದೇವನನ್ನು ರಕ್ಷಿಸಲು ಉಳಿದಳು ತನ್ನ ಬದುಕನ್ನು ಸಾಮಾಜಿಕ, ಧಾರ್ಮಿಕ ಕಾರ್ಯಗಳಿಗಾಗಿ ಸವೆಸಿದಳು. ಕೊಡುಗೈ ದಾನಿಯಾಗಿ ' ದಾನ ಚಿಂತಾಮಣಿ ' ಯಾದಳು ತಾನು ಕಾವ್ಯ ವನ್ನು ಬರೆಯದಿದ್ದರು ರನ್ನನಂಥ ಕವಿಗೆ ಆಶ್ರಯ ಕೊಟ್ಟಳು, ಕಾವ್ಯ ಬರೆಸಿದಳು, ಪೊನ್ನ ಕವಿಯ ಶಾಂತಿ ಪುರಾಣದ ಪ್ರತಿಗಳನ್ನು ಮಾಡಿಸಿ ದಾನ ಮಾಡಿದಳು, ತಾನು ಮಹಾ ಕಾವ್ಯವಾಗಿ ಬಾಳಿದಳು, ಬೆಳಗಿದಳು, ತೀರ್ಥಂಕರರ ಪ್ರತಿಮೆಗಳನ್ನು ಮಾಡಿಸಿದಳು ಬಸದಿ ಕಟ್ಟಿಸಿದಳು ಸೂರ್ಯಚಂದ್ರಯಿರುವವರೆಗೆ ಶಾಶ್ವತವಾಗಿ ಜನಮನದಲ್ಲಿ ನೆಲೆಸಿದಳು.

" ಹೊಯ್ಸಳ ವಿಷ್ಣುವರ್ಧನನ ಮಹಾರಾಣಿ ಶಾಂತಲಾದೇವಿ ನೃತ್ಯ ಪ್ರವೀಣೆ, ಲಲಿತಕಲೋಪಾಸಕಗಳು, ಲಾವಣ್ಯವತಿಯೂ ಆಗಿದ್ದಳು. ಕ್ರಿ.ಶ ೧೧೨೩ರಲ್ಲಿ ಈಕೆ ಶ್ರಾವಣ ಬೆಳುಗೊಳ ದಲ್ಲಿ ಒಂದು ಬಸದಿ ಕಟ್ಟಿಸಿ, ಉದ್ಯಾನವನವನ್ನು ಮಾಡಿಸಿ. ಭಕ್ತ ಜನರ ನಿತ್ಯ ಪೂಜೆಗೋಸ್ಕರ ಒಂದು ಹಳ್ಳಿಯನ್ನೇ ದತ್ತಿಯಾಗಿ ಬಿಟ್ಟುಕೊಟ್ಟಳು. ಹತ್ತಾರು ಶಿಲಾ ಶಾಸನಗಳು ಈ ಜೈನ ಮಹಿಳೆಯಾದ ಶಾಂತಲಾದೇವಿಯು ಎಸಗಿದ ಜೈನ ಧರ್ಮದ ಪ್ರಚಾರ ಕಾರ್ಯವನ್ನು ಪ್ರಶಂಸಿವೆ "[೯]. ತುಂಬು ಯೌವ್ವನದಲ್ಲಿ ತನ್ನ ಕೀರ್ತಿಯ ಪಲಾಕಾಷ್ಠೆಯಲ್ಲಿ ಶಾಂತಲೆಯು ಸಲ್ಲೇಖನದ ವಿಧಿಯನ್ನು ಅಂಗೀಕರಿಸಿ ಪ್ರಾಣತ್ಯಾಗಮಾಡಿದಳು.

" ವಿದ್ವಾಂಸರ ಅಭಿಪ್ರಾಯದಂತೆ ಕಂತಿ ಕನ್ನಡ ಸಾಹಿತ್ಯದ ಮೊದಲ ಕವಯತ್ರಿ ' ಕಂತಿ ಹಂಪರ ಸಮಸ್ಯೆಗಳು' ಎನ್ನುವ ಕೆಲವು ಪದ್ಯಗಳಿಂದ ಈಕೆ ದ್ವಾರ ಸಮುದ್ರದ ಬಲ್ಲಾಳರಾಯನ ಆಸ್ಥಾನ ಕವಿ ನಾಗಚಂದ್ರ ಸಮಕಾಲೀನಳೆಂದು ತಿಳಿದು ಬರುತ್ತದೆ . ' ಕಂತಿ ' ಎನ್ನವುದು ವ್ಯಕ್ತಿಯ ಹೆಸರೇ ' ಕಂತಿ ' ಎಂದರೆ ಜೈನ ಸನ್ಯಾಸಿನಿ ಎಂಬ ಅರ್ಥವಿದೆ ಈಕೆ ಜೈನ ಸನ್ಯಾಸಿಯೇ ? ಅಥವಾ ಅನೇಕ ಜೈನ ಸನ್ಯಾಸಿನಿಯರಿದ್ದು ಅವರನ್ನೆಲ್ಲಾ ' ಕಂತಿ ' ಎಂದು ಕರೆದಿರಬಹುದೇ ? ಎಂಬ ಕೆಲವು ಸಂದೇಹಗಳು ವಿದ್ವಾಂಸರಲ್ಲಿ ಮೂಡಿರುವುದು ಎಂದು ಕಮಲಾ ಹಂಪನಾ ಇವರು ತಮ್ಮ ಲೇಖನದಲ್ಲಿ ಹೇಳಿರುತ್ತಾರೆ "[೧೦]. ಇದಕ್ಕೆ ಪರಿಹಾರವನ್ನು ಕೆಲವು ಆಧಾರಗಳೊಂದಿಗೆ ಹೇಳುತ್ತಾ ಕಂತಿಯರು ವಿದ್ವಾಂಸರಾಗಿದ್ದರು ಅವರು ಅನೇಕ ವಿದ್ವತ್ ಗೋಷ್ಠಿಗಳಲ್ಲಿ, ವಾದ ವಿವಾದಗಳಲ್ಲಿ ಭಾಗವಹಿಸಿ ತಮ್ಮ ವರ್ಚಸ್ಸೀ ಪ್ರಭಾವಗಳನ್ನು ಬೀರುತ್ತಿದ್ದ ನಿದರ್ಶನಗಳನ್ನು ಶಾಸನಗಳಲ್ಲಿ ದೊರೆಯುತ್ತದೆ ಎಂದು ಸ್ಪಷ್ಟಪಡಿಸಿರುತ್ತಾರೆ ಪ್ರಾಚೀನ ಓಲೆ ಗರಿಗಳಲ್ಲಿ ದೊರೆಯುವ ಕಂತಿ ಹಂಪರ ಸಮಸ್ಯಾ

ಪದ್ಯಗಳು ಆಕೆಯ ಅಸ್ತಿತ್ವಕ್ಕೆ ಪೂರಕವಾಗಿದೆ. ನಾಗಚಂದ್ರನ ಸಮಸ್ಯಾ ಪೂರ್ಣವಾದ ಪ್ರಶ್ನೆಗಳಿಗೆ ಒಡನೆ ಉತ್ತರ ಕೊಟ್ಟು ಕಂತಿ ಒಬ್ಬ ಆಶು ಕವಯತ್ರಿ ಚಮತ್ಕಾರ ಹಾಗೂ ಸಾಹಿತ್ಯದ ಗುಣದಿಂದ ಉತ್ತರಕೊಟ್ಟು ಆಕೆ ಆಗ್ರಗಣ್ಯೆ ನಿತ್ಯನೂತನೆ, ಒಳ್ಳೆಯ ಕವಯತ್ರಿ ಎಂದೆನಿಸಿ ಕೊಂಡಿದ್ದಾಳೆ.

" ಹೀಗೆ ಜೈನ ಮಹಿಳೆಯರು ದಾನಿಗಳಾಗಿ, ಅನನ್ಯ ಪತಿಭಕ್ತೆಯರಾಗಿ, ಕಂತಿಯಾರಾಗಿ, ತ್ಯಾಗಿಗಳಾಗಿ, ಆದರ್ಶ ಮಾತೆಗಳಾಗಿ, ಮತೋದ್ಧಾರಕರಾಗಿ ಧರ್ಮ ದೇವತೆಯಾಗಿ, ಜಂಗಮ ಜಿನಶಾಸನದಂತೆ ಶೋಭಿಸಿ, ಘನತೆ ಗೌರವಗಳಿಂದ ಲೋಕ ವಿಖ್ಯಾತನಾಗಿದ್ದಾರೆ. ಅವರ ಆದರ್ಶ ಗುಣಗಳ ಸಮೂಹ ಸಾರವನ್ನು ಕನ್ನಡದ ಕವಿಯೊಬ್ಬಹೀಗೆ ಬಣ್ಣಿಸಿದ್ದಾರೆ.

ಗುಣದೊಳ್ ರೂಪಿನೊಳ್ ಒಳ್ಪಿನೊಳ್ ಸೊಬಗಿನೊಳ್ ಶೃಂಗಾರದೊಳ್ ಸೌಮ್ಯಲ
ಕ್ಷಣದೊಳ್ ಮೈಮೆಯೊಳ್ ಓಜೆಯೊಳ್ ವಿಭವದೊಳ್ ಶಿಲಂಗಳೊಳ್ ಭೃತ್ಯ ಪೋ
ಷಣದೊಳ್ ಭೋಗದೊಳಾರ್ಪಿನೊಳ್ ವಿಭೂತಿಯೊಳ್ ಕಾರುಣ್ಯದೊಳ್ ಪೋಲಿಸ
ಲ್ಕೆಣೆಯಾರ್ ಗೆಲ್ವ ಬೆಡಂಗಿಗೆಂದನುದಿನಂ ವಿದ್ವಜ್ಜನಂ ಬಣ್ಣಕುಂ " [೨೨].

ಸ್ತ್ರೀ ಶಿಕ್ಷಣ ಉತ್ತೇಜನಕಾಯಾಗಿರಲಿಲ್ಲವೆಂದು ತಿಳಿಯಲಾದ ಪ್ರಾಚೀನ ಕಾಲದಲ್ಲಿ ಉದ್ದಕ್ಕೂ ಜೈನ ಸಮಾಜದಲ್ಲಿ ಮಹಿಳೆಯರಿಗೆ ವಿದ್ಯಾಭ್ಯಾಸ ನೀಡುತ್ತಿದ್ದರು. ಶಾಸನ ಮತ್ತು ಓಲೆಗರಿಗಳ ಪರಿಶೀಲನೆಯಂದ ಈ ತಿಳಿವಳಿಕೆ ಹುರಿಗೂಡಿದೆ. ಕಾವ್ಯಗಳನ್ನೂ ಧರ್ಮಗ್ರಂಥಗಳನ್ನೂ ಬರೆಸಿ ಪ್ರಸಾರಮಾಡಿದಲ್ಲಿ ಜೈನ ಮಹಿಳೆಯರು ಆದ್ಯರೂ ಆದರ್ಶರೂ ಆಗಿದ್ದಾರೆ. ಮುದ್ರಣ ಸೌಲಭ್ಯ ಬಳಕೆಗೆ ಬರುವುದಕ್ಕೆ ನೂರಾರು ವರ್ಷಗಳ ಹಿಂದೆ ಜೈನ ಸಮಾಜ ಕಾವ್ಯಗಳನ್ನೂ ಶಾಸ್ತ್ರ ಗ್ರಂಥಗಳನ್ನೂ ಓಲೆಗರಿ ಪ್ರತಿ ಮಾಡಿಸಿ ಶಾಸ್ತ್ರದಾನ ಮಾಡುತ್ತಿದ್ದ ಸಂಗತಿ ಪ್ರಸಿದ್ಧವಾಗಿವೆ. ದಾನ ಚಿಂತಾಮಣಿ ಅತ್ತಿಮಬ್ಬೆ ಪೊನ್ನ ಕವಿಯ ' ಶಾಂತಿ ಪುರಾಣ ' ದ ತಾಳೆಗರಿ ಪ್ರತಿಗಳನ್ನು ನಕಲು ಮಾಡಿಸಿ ಉಚಿತವಾಗಿ ಹಂಚಿದಳಲ್ಲದೆ. ರನ್ನನಿಂದ ' ಅಜಿತಪುರಾಣ 'ವನ್ನು ಬರೆಸಿ ಪ್ರತಿಗಳನ್ನು ಶಾಸ್ತ್ರದಾನ ಮಾಡಿದಳು. ಅವಳ ಮನೆ ಪಂಡಿತಮಂಡಳಿಗೆ ತವರುಮನೆಯಾಗಿತ್ತು. ಜೈನ ಪರಂಪರೆಯಲ್ಲಿ ಸ್ತ್ರೀಯರು ಶಾಸ್ತ್ರದಾನವನ್ನು ಮುಂದುವರಿಸಲು ಅತ್ತಿಮಬ್ಬೆಯ ಮೇಲ್ಪಂಕ್ತಿಯಲ್ಲದೆ ಧಾರ್ಮಿಕ ಸಂಸಾರವೂ ಪ್ರೇರಣೆ ಕೊಟ್ಟಿದೆ.

ತಾಯಿ ತಂದೆಯರೂ ಪೋಷಕರು ಗಂಡು ಮಕ್ಕಳಿಗೆ ಹೇಗೋ ಹಾಗೆ ಹೆಣ್ಣು ಮಕ್ಕಳಿಗೂ ಶೈಕ್ಷಣಿಕ ಪರಿಸರವನ್ನು ನಿರ್ಮಿಸಿಕೊಟ್ಟಿರುವುದು ಜೈನ ಧರ್ಮದ ಹೆಚ್ಚಳ. ಮನೆಯೊಳಗೆ ಕುಳಿತರೂ ಕಲಿಕೆ ನಿಲ್ಲಿಸಬಾರದೆಂದು ಓಲೆಗರಿ ಗ್ರಂಥಗಳನ್ನು ಒದಗಿಸಿಕೊಡುತ್ತಿದ್ದರು . ಜೈನ ಧರ್ಮದಲ್ಲಿ ಜೈನ ಮಹಿಳೆಯೆಂಬ ಬಿರುದನ್ನು ಹೊಂದಿದ ಕವಯತ್ರಿ ರಾಧಮ್ಮ ೨೦ನೆ ಶತಮಾನದ ಆದಿಯಲ್ಲಿ ಅನೇಕ ದೇವತಾಸ್ತುತಿಗಳನ್ನು, ಸ್ತೋತ್ರಗಳನ್ನು, ಹಾಗೂ ಮಹಾಕಾವ್ಯವನ್ನು ರಚಿಸಿ ಈ ಮೂಲಕ ಜೈನ ಧರ್ಮದ ಪ್ರಚಾರವನ್ನು ತಮ್ಮ ಸಾಹಿತ್ಯದ ಮೂಲಕ ಮಾಡಿರುವರು. ವರ್ಧಮಾನ ತೀರ್ಥಂಕರರ ಚರಿತ್ರೆಯನ್ನು ಜನಸಾಮಾನ್ಯರಿಗೆ ತಲುಪಿಸಲು ಮೇರು ಕೃತಿಯನ್ನು ರಚಿಸಿಯು ರಾಧಮ್ಮನವರು ಅಜ್ಞಾತರಾಗಿ ಉಳಿದಿರುವುದು ಆಶ್ಚರ್ಯದಾಯಕವಾಗಿದೆ.

ಟಿಪ್ಪಣಿಗಳು|:-

೧. ಕಮಲ ಹಂಪನಾ, ಬೊಗಸೆ (ಮಹಿಳೆ ಸುತ್ತ ಮುತ್ತ), ಪು. ೩೭

೨. ಅದೇ, ಪು. ೩೮.

೩. ಅದೇ, ಪು. ೩೭.

೪. ಅದೇ, ಪು. ೩೮.

೫. ಅದೇ, ಪು. ೮೧.

೬. ಅದೇ, ಪು. ೭೫.

೭. ಅದೇ, ಪು. ೭೬.

೮. ಅದೇ, ಪು. ೭೭.

೯. ಅದೇ, ಪು. ೭೯.

೧೦. ಅದೇ, ಪು. ೪೯.

# ೪. ' ಜೈನ ಮಹಿಳೆ ' ರಾಧಮ್ಮನವರ ಬದುಕು

**4.1.0 - ಪ್ರವೇಶ :-** ೨೦ ನೆಯ ಶತಮಾನದ ಆದಿಯಲ್ಲಿ ಸುಮಾರು ಅರವತ್ತು ವರುಷ ಒಬ್ಬ ಸ್ತ್ರೀಯು ' ಜೈನ ಮಹಿಳೆ ' ಎಂಬ ಹೆಸರಿನಿಂದ ಎಲೆ ಮರೆಯ ಹೂವಾಗಿ ಅರಳಿ ಕಾಯಾಗಿ ದುಡಿದು ಹಣ್ಣಾಗಿ ಬಾಳಿದರು. ಜೈನ ಮಹಿಳೆಯು ಹೆಸರು ರಾಧಮತಿ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ಇವರ ಊರು ' ನೆಲ್ಲಿಕಾರು ಜೈನಮಹಿಳೆ' ಎಂಬುದು ಇವರ ಕಾವ್ಯ ನಾಮ ಈ ಹೆಸರಿನಿಂದಲೇ ಇವರು ಚಿರಪರಿಚಿತರು.

**4.2.0 - ಬಾಲ್ಯ :-** ' ಜೈನ ಮಹಿಳೆ ' ಎಂದೇ ಪ್ರಖ್ಯಾತರಾದ ರಾಜ್‌ಮತಿ, ರಾಧಾಬಾಯಿ, ರಾಧಮತಿ, ರಾಧಮ್ಮ ನವರು ೧೯೩೯ ರಲ್ಲಿ ನೆಲ್ಲಿಕಾರು ಶಾಂತಿರಾಜ ಶೆಟ್ಟರ ಮತ್ತು ಚಿನ್ನಮ್ಮ ದಂಪತಿಗಳ ಹಿರಿಯ ಮಗಳಾಗಿ ಬೆಳ್ತಂಗಡಿ ತಾಲೂಕು ಗುರುವಾಯನಕೆರೆ ಜೈನ ಪೇಟೆಯಲ್ಲಿ ಜನ್ಮವೆತ್ತರು ಇವರ ಒಡಹುಟ್ಟಿದವರು ಕಮಲಮ್ಮ, ಪದ್ಮಾವತಿ ಅಮ್ಮ, ಪದ್ಮರಾಜ ಮತ್ತು ಧರ್ಮಪಾಲ ಇವರಾರು ಇಂದು ಜೀವಂತವಾಗಿಲ್ಲ. ಚಿನ್ನಮ್ಮ ಪ್ರಸಿದ್ಧ ಆಯುರ್ವೇದ ಪಂಡಿತೆಯಾಗಿದ್ದು ಅದರಲ್ಲೂ ಸ್ತ್ರೀರೋಗ ತಜ್ಞೆಯಾಗಿದ್ದರು. ಸಂಪ್ರದಾಯದಲ್ಲಿ ದಿನಚರಿ ಆರಂಭಿಸುವ ಪದ್ಧತಿ ಇವರದು, ಜಾತಿ, ಮತ, ಭೇದ ಭಾವಗಳಿಲ್ಲದೆ ಚಿನ್ನಮ್ಮ ಚಿಕಿತ್ಸೆಯನ್ನೀಯುತ್ತಿದ್ದರು. ಇಂತಹ ತಾಯಿಯ ಮಗಳಾಗಿ ಸುಸಂಸ್ಕೃತ ವಾತಾರಣದಲ್ಲಿ ಜನಿಸಿದ ರಾಧಮ್ಮನವರ ವಿದ್ಯಾಭ್ಯಾಸ ಹೆಚ್ಚೇನೂ ಆಗಲಿಲ್ಲ. ತಂದೆ ಶಾಂತಿರಾಜ ಶೆಟ್ಟರು ದಿನಸಿ ಅಂಗಡಿ ವ್ಯಾಪಾರಸ್ಥರಾಗಿದ್ದರು.

**4.3.0 - ವಿದ್ಯಾಭ್ಯಾಸ :-** ಪುತ್ತೂರಿನಲ್ಲಿ ತನ್ನ ಅಜ್ಜ ಬ್ರಹ್ಮಯ್ಯ ಶೆಟ್ಟಿ ಮನೆಯಲ್ಲಿ ಬಾಲ್ಯ ಕಳೆದು, ಅಲ್ಲೆ ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮಾಡಿದರು. ಮನೆಯ ಧಾರ್ಮಿಕ ವಾತಾವರಣ ಸ್ವಾಧ್ಯಾಯ, ದೈವ ದತ್ತವಾದ ಪ್ರತಿಭೆ, ಅಂತಃ ಸ್ಫೂರ್ತಿಯಿಂದ ಚಿಕ್ಕಂದಿನಿಂದಲೇ ಶೋಭಾನೆ, ದೇವಸ್ತವನ, ಭಜನೆ ಇತ್ಯಾದಿಗಳನ್ನು ರಚಿಸುತ್ತಿದ್ದರು.

**4.4.0 - ಕೌಟುಂಬಿಕ ಚಿತ್ರಣ :-** ೧೯೧೮ ರಲ್ಲಿ ನೆಲ್ಲಿಕಾರು ಎನ್ ಎಸ್ ಜೈನಿಯವರನ್ನು ವಿವಾಹವಾಗಿ ನೆಲ್ಲಿಕಾರಿಗೆ ಬಂದರು. ಅವರ ಪತಿ ನೆಲ್ಲಿಕಾರು ಸರಕಾರಿ ಪ್ರಾಥಮಿಕ ಶಾಲೆಯ ಅಧ್ಯಾಪಕರು, ಸಂಶೋಧಕರು ಮತ್ತು ವಿದ್ವಾಂಸರೂ ಆಗಿದ್ದರು. ಜೊತೆಗೆ ಅವರಿಗೆ ಊರಿನ ಪೋಸ್ಟ್ ಮಾಸ್ಟರ್ ಹುದ್ದೆಯೂ ಇದ್ದಿತು. ಪ್ರಾಥಮಿಕ ಶಾಲೆಯ ವೃತ್ತಿಯನ್ನು ನಡೆಸುತ್ತಿದ್ದು ಇವರು ಸಾಹಿತ್ಯವನ್ನು ಉಪವೃತ್ತಿಯಾಗಿ ಸ್ವೀಕರಿಸಿದ್ದರು. ಕನ್ನಡ ಭಾಷೆಯಲ್ಲದೆ. ಹಿಂದಿ, ಮರಾಠಿ, ಸಂಸ್ಕೃತ ಮೊದಲಾದ ಭಾಷೆಗಳಲ್ಲೂ ಪ್ರಾವೀಣ್ಯತೆ ಪಡೆದು ತಮ್ಮ ಸ್ವಂತ ಪ್ರಯತ್ನದಿಂದ ಮೇಲಕ್ಕೆ ಬಂದವನು. ಶ್ರೀವರ್ಮ ಶೆಟ್ಟರು ಪ್ರಾರಂಭಿಸಿದ ಶ್ರೀ ಅನಂತಕೀರ್ತಿ ಗ್ರಂಥ ಮಾಲೆಯ ಸಕ್ರಿಯ ಸದಸ್ಯರಾಗಿ ಅದರ ಹೊಣೆಯನ್ನು ಹೊತ್ತು ಮುನ್ನಡೆಸಿದರು. ಸುಮಾರು ೭೦೦ಕ್ಕೂ ಹೆಚ್ಚು ಧಾರ್ಮಿಕ ಗ್ರಂಥಗಳನ್ನು ಸಂಗ್ರಹಿಸಿ ದಾಖಲೆ ಸ್ಥಾಪಿಸಿದರು. ಸ್ವತಃ ಲೇಖಕರಾದ ಇವರು ' ಅಹಿಂಸೆ ', ' ಸತ್ವ ಪರೀಕ್ಷೆ ' ಮೊದಲಾದ ಕೃತಿಗಳನ್ನು ರಚಿಸಿದ್ದಲ್ಲದೆ ಅನ್ಯ ಭಾಷೆಯ ಉತ್ತಮ ಗ್ರಂಥಗಳನ್ನು ಕನ್ನಡ ಭಾಷೆಗೆ ಅನುವಾದಿಸಿದ್ದಾರೆ. ಇವರು ಬರೆದ ಅನೇಕ ಲೇಖನಗಳು ನಾಡಿನ ಖ್ಯಾತ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರ ಈ ಪ್ರವೃತ್ತಿಯಿಂದಾಗಿ ರಾಧಮ್ಮನವರಿಗೆ ವಿವಾಹ ನಂತರ ಕಾವ್ಯ ಕೌಶಲ್ಯದ ಹೆಬ್ಬಾಗಿಲು ತೆರೆಯಿತು ಕಾವ್ಯ ಹೆಚ್ಚಿನ ಸಮೃದ್ಧಿಯನ್ನು ತಂದಿತು.

ಈ ದಂಪತಿಗಳಿಗೆ ನಾಲ್ವರು ಗಂಡು ಮಕ್ಕಳು, ಮೂವರು ಹೆಣ್ಣು ಮಕ್ಕಳು ಹಿರಿಯವರಾದ ಡಾ ಪದ್ಮನಾಭ ಎಸ್ ಜೈನಿ, ಎಂ.ಎ,ಡಿ ಲಿಟ್ ಪದವೀಧರರು ಪ್ರಸ್ತುತ ಅಮೇರಿಕೆಯ ಕ್ಯಾಲಿಫೋರ್ನಿಯ ವಿಶ್ವ

ವಿದ್ಯಾಲಯದಲ್ಲಿ ಏಷ್ಯಾ ಖಂಡದ ದಕ್ಷಿಣ ಪೂರ್ವ ದೇಶಗಳ ಭಾಷಾ ವಿಭಾಗದಲ್ಲಿ ಪ್ರೋಫೆಸರರಾಗಿ ದುಡಿಯುತ್ತಿದ್ದಾರೆ. ಎರಡನೆಯವರು ಶ್ರೀ ಪ್ರಭಾಕರ ಚಿಕ್ಕಂದಿನಲ್ಲಿಯೇ ಸ್ವರ್ಗಸ್ಥರಾದರು. ಮೂರನೆಯವರಾದ ಧನ್ಯ ಕುಮಾರ್ ಎಸ್. ಜೈನಿ ಎಂ. ಎ, ಡಿ ಲಿಟ್ ಪದವೀಧರರರು ಪ್ರಸ್ತುತ ಪ್ರಾಧ್ಯಾಪಕರು ಕಿರಿಯವರಾದ ಗುಣವರ್ಮ ಜೈನಿ ಎಳೆಯ ವಯಸ್ಸಿನಲ್ಲಿಯೇ ಸ್ವರ್ಗಸ್ಥರಾದರು.ಹೆಣ್ಣು ಮಕ್ಕಳಲ್ಲಿ ಹಿರಿಯರಾದ ಶ್ರೀಮತಿ ರೇವತಿ ಅಮ್ಮನವರು ಕಾಪು ಬೀಡಿನ ಶ್ರೀ ಲಕ್ಷ್ಮೀಧರ ಶೆಟ್ರ ಧರ್ಮಪತ್ನಿ ಇವರು ತಾಯಿಯಂತೆ ಆಶುಕವಿ, ಕವಿತೆ, ಭಜನೆ, ಅಷ್ಟಕಗಳನ್ನು ಆತ್ಮ ಸಂತೋಷಕ್ಕಾಗಿ ರಚಿಸಿದರು ಎರಡನೆಯವರು ರೋಹಿಣಿ ಅಮ್ಮ ಮೂಡುಬಿದ್ರೆ ತಮನಂಗಡಿ ಎಂ ಆದಿರಾಜ, ಎಂ.ಎ. ಬಿಟಿ ಇವರ ಧರ್ಮಪತ್ನಿ ಇವರೂ ತಾಯಿಯಂತೆ ಹಾಡುಗಳನ್ನು ರಚಿಸುವ ನೈಪುಣ್ಯತೆ ಉಳ್ಳವರು ಕಿರಿಯವರಾದ ಯಶೋದ ಬಾಲ್ಯದಲ್ಲಿಯೇ ಸ್ವರ್ಗಸ್ಥರಾಗಿದ್ದಾರೆ.

**4.5.0 - ಕಾವ್ಯನಾಮ :-** ಕವಯತ್ರಿ ರಾಧಮತಿ ಅಮ್ಮ ತನ್ನ ಕಾವ್ಯಗಳನ್ನು ' ಜೈನ ಮಹಿಳೆ ' ಎಂಬ ಹೆಸರಿನಿಂದ ರಚಿಸಲು ಪ್ರಕಟಿಸಲು ಕಾರಣ ಶ್ರವಣಬೆಳುಗೊಳದ ಮಹಾಮಸ್ತಕಾಭಿಷೇಕದ ಸಂದರ್ಭದಲ್ಲಿ ಅಂದು ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಮಂಜಯ್ಯ ಹೆಗ್ಗಡೆಯ ಪತ್ನಿ ಮಹಿಳಾ ಸಭೆಯ ಸಮ್ಮೇಳನಾಧ್ಯಕ್ಷರಾಗಿದ್ದರು ಅಂದು ಅವರು ರಾಧಮತಿಯವರ ಕಾವ್ಯಾ ಕೌಶಲ್ಯವನ್ನರಿತು ' ಜೈನ ಮಹಿಳೆ ' ಎಂಬ ಬಿರುದನ್ನು ಪ್ರಧಾನಿಸಿದರು. ಅನಂತದಲ್ಲಿ ರಾಧಮ್ಮ ತನ್ನ ಬಿರುದನ್ನು ' ನೆಲ್ಲಿಕಾರು ಜೈನ ಮಹಿಳೆ ' ಯೆಂಬ ಕಾವ್ಯನಾಮದಿಂದ ರಚಿಸಿದರು.

**4.6.0 - ಸಾಹಿತ್ಯ ಸೃಷ್ಟಿ :-** ರಾಧಮ್ಮನವರಿಗೆ ದೇವರ ಸ್ಮರಣೆಯಾದೊಡನೆ ಕಾವ್ಯವು ಛಂದೋಬದ್ಧವಾಗಿ ಹೊಮ್ಮುತ್ತಿತ್ತು. ನಿತ್ಯ ದೇವರ ದರ್ಶನಕ್ಕಾಗಿ, ಭಜನೆಗಾಗಿ ಸುತ್ತಿ ರಚಿಸಿದರು ಪ್ರತಿಭೆ ಉಕ್ಕಿದಾಗ ಕ್ಯಾಲೆಂಡರಿನ ಹಿಂಬದಿಯ ಹಾಳೆಯಲ್ಲಿ ಸ್ಲೇಟಿನಲ್ಲಿ, ಪುಸ್ತಕದ, ಬರೆದುಳಿದ ಪುಟಗಳಲ್ಲಿ ತುಂಡು ಕಾಗದಗಳಲ್ಲಿ ಸಿಕ್ಕಿದ ಉಪಕರಣಗಳಲ್ಲಿ ಗೀಚಿ ಕವಿತೆ ತುಂಬಿ ಬಿಡುತ್ತಿದ್ದರು. ಪ್ರತಿಭೆ ಉಕ್ಕಿದಾಗ ಪ್ರೇರಣೆ ಸಿಕ್ಕಿದಾಗ ಸ್ಫೂರ್ತಿ ತುಂಬಿದಾಗ ಸಿಕ್ಕಿದಲ್ಲಿ ಗೀಚಿ ಹಾಕುವ ಪ್ರವೃತ್ತಿಯನ್ನಾಗಿಸಿಕೊಂಡು ರಾಧಮ್ಮನವರು ತಮ್ಮ ದೈನಂದಿನ ಕೈಂಕರ್ಯವನ್ನು ಮಾಡುವ ಸಂದರ್ಭದಲ್ಲಿ ಅಂದರೆ ಅಡುಗೆ ಮಾಡುವಾಗ, ಕಟ್ಟಿಗೆಯನ್ನು ಒತ್ತಟ್ಟಿಗೆ ಇಡುವಾಗ, ಸ್ವಯಂ ಪ್ರೇರಿತರಾಗಿ ಸ್ಫೂರ್ತಿಯಿಂದ ನಿರರ್ಗಳವಾಗಿ ಕಾವ್ಯವು ಹೊರಹೊಮ್ಮುತ್ತಿತ್ತು ಇದ್ದಿಲಿನ ತುಂಡಿನಿಂದಲೂ ಗೋಡೆಯ ಮೇಲೆ ಗೀಚುವ ಕ್ರಿಯೆಯನ್ನು ಗೈಯ್ಯುತ್ತಿದ್ದರು.

ರಾಧಮ್ಮನವರ ಕವಿತಾ ಶಕ್ತಿ ಶಾಲಾ, ಕಾಲೇಜುಗಳ ವಿದ್ಯಾಭ್ಯಾಸದ ಹಿನ್ನಲೆಯಿಂದ ಬಂದುದಲ್ಲವೆಂದು ಆಲೋಚಿಸುವಾಗ ಆಶ್ಚರ್ಯದೊಂದಿಗೆ ಅಭಿಮಾನವೂ ಉಂಟಾಗುತ್ತದೆ. ಇದು ಅವರ ಹುಟ್ಟು ಪ್ರತಿಭೆಯೆಂದು ಗೌರವ ಉಂಟಾಗುವುದು. ' ಪ್ರತಿಭಾನ್ವಿತ ಕವಯತ್ರಿಯ ಬಗ್ಗೆ ಹೆಚ್ಚು ಹೆಚ್ಚು ತಿಳಿದುಕೊಳ್ಳಬೇಕೆಂದು ಪ್ರಯತ್ನಿಸಿದಾಗಲೆಲ್ಲಾ ಅವರ ಸ್ವಂತ ವಿಚಾರದ ಬಗ್ಗೆ ತಿಳಿಯುವುದಕ್ಕಿಂತ ಹೆಚ್ಚಾಗಿ ಅವರ ಅಸಾಮಾನ್ಯ ಪ್ರತಿಭೆಯ ಪರಿಚಯವಾಗುವುದು. ರಾಧಮ್ಮನ ಪ್ರತಿಭೆ ಎಲೆ ಮರೆಯ ಪ್ರತಿಭೆಯಾದುದಕ್ಕೆ ಕಾರಣ ಖ್ಯಾತಿ, ಪೂಜಾ, ಲಾಭದ ಆಶೆಯಿಲ್ಲದೆ ಅಥವಾ ಯಾವುದೇ ಪ್ರತಿ ಫಲದ ಅಪೇಕ್ಷೆ ಇಲ್ಲದೆ ತನ್ನ ಆತ್ಮ ಸಂತೋಷಕ್ಕಾಗಿ ಕೃತಿಗಳನ್ನು ಬರೆದರು ಈ ಕಾವ್ಯ ತಪಸ್ವಿನಿ '.

' ರಾಜ ಮಹಾರಾಜರ ಅಥವಾ ಸರಕಾರದ ಆಶ್ರಯವಿಲ್ಲದೆ, ಪರಿಸರದ ಜನರ ಅಥವಾ ಪ್ರಕಾಶಕರ ಬೆಂಬಲವಿಲ್ಲದೆ ಕೇವಲ ತನ್ನ ಪತಿಯಿಂದ ಸಿಕ್ಕಿದ ಅಲ್ಪ ಸಲ್ಪ ಮಾತಿನ ಪ್ರೋತ್ಸಾಹದಿಂದಲೇ ಕಾವ್ಯರಚನೆಗಳನ್ನು ಮಾಡಿ ಮನೆಯ ಗೋಡೆಯ ಮೇಲೆ ಕ್ಯಾಲೆಂಡರುಗಳ ಖಾಲಿ ಪುಟದಲ್ಲಿ ಬರೆದು ಹಾಕುತ್ತಿದ್ದ ಈ ಮಹಿಳೆಯ

ಅಸಾಮಾನ್ಯ ಕವಿತಾ ಶಕ್ತಿಯ ಬಗ್ಗೆ ಸಂದರ್ಭ ಸಿಕ್ಕಿದಾಗಲೇಲ್ಲಾ ಆಭಿಮಾನದಿಂದ ವಿವರಿಸುತ್ತಿದ್ದೆವು [೨].'

ಕವಯತ್ರಿ ರಾಧಮ್ಮನ ಕುರಿತು ಮಂ. ಗೋವಿಂದ ಪೈಯವರು ಹೀಗೆಂದಿದ್ದಾರೆ " ಕವಯತ್ರಿಯ ಅನಂತಮತಿ ಕೃತಿಯನ್ನು ಈ ಚಿಕ್ಕ ಕಾವ್ಯವನ್ನು ಕಂಡಾಗ ಅದರಲ್ಲಿ ತೋರಿದಾ ಪ್ರತಿಭೆಯು ಶುಕ್ರೋದಯವು ಬೇಗನೆ ಉಷಃ ಕಾಲದಲ್ಲಿ ಪರಿಣಮಿಸದಿರದೆಂದು ಭಾವಿಸಿದ್ದೆ. ಅದು ' ಲಕ್ಷ್ಮೀ ಬಾಯಿ ' ಎಂಬೀ ಕವಿತೆಯಲ್ಲಿ ಮೂಡಿದೆ. ೨ - ೩ ವರ್ಷಗಳ ಹಿಂದೆ ಪುತ್ತೂರಿನ ' ಕರ್ನಾಟಕ ಕೇಸರಿ ' ಯಲ್ಲಿ ಕ್ರಮಶಃ ಪ್ರಕಟವಾದೀ ಕೃತಿ ಈ ವಾಗ ಪುಸ್ತಕ ರೂಪದಲ್ಲಿ ಪ್ರಕಟಿಸಲ್ಪಟ್ಟಿದ್ದು ಅಭಿನಂದನೀಯದೇ ಕವಿತೆ ಚಿಕ್ಕದಾದರೂ ಇದು ಸರಿಯಾಗಿದೆ, ಸೊಗಸಾಗಿದೆ, ಕಬ್ಬಿಂದ ತಿಳಿದ ಧಾರೆಯಲ್ಲ, ಹುಟ್ಟಿನ ಜೇನಂತೆ ಸೂಸುತ್ತಿದೆ. ಆಂಗ್ಲ ಕವಿ ಟೆನ್ನಿಸನನ ' ಡೋರಾ ' ಎಂಬ ಆ ಚಿಕ್ಕ ಕವಿತೆ ಇದು ಕಿರಿದಾದರೂ ಈ ಕವಿತೆಯಲ್ಲಿ ಒಂದೆಡೆ ವಾರಾಂಗನೆಯ ಧರ್ಮಬುದ್ಧಿ, ಇನ್ನೊಂದೆಡೆ ಬ್ರಾಹ್ಮಣಿಯ ಪತಿಭಕ್ತಿ, ಇವರಲ್ಲಿ ಯಾವುದು ಮೇಲೆಂದು ತಿಳಿಯು ಬಾರದಂತೆ ವಾಚಕರ ಮನಸ್ಸನ್ನು ಚಮತ್ಕಾರದಿಂದ ಅತ್ತಿತ್ತ ಆಡಿಸುತ್ತಿರುವ ಕವಿತಾಶಕ್ತಿ ಮಾತ್ರ ಕಿರಿದಲ್ಲ ಇದರಿಂದ ಇವರು ಹುಟ್ಟು ಕವಿ ಎಂಬುದು ತುಂಬ ವ್ಯಕ್ತವಾಗುತ್ತದೆ. ಒಂದೇ ಮಾತಿಂದ ಹೇಳುವುದಾದರೆ ಈ ಕವಿತೆ

' ಹಸ್ತ ಪ್ರಾಪ್ತ್ಯ ಸ್ತಬಕ ನಮಿತೋ ಬಾಲ ಮಂದಾರ ವೃಕ್ಷ'

ಎಂಬಂತಿದೆ - ನುಡಿಗಳ ಹಸುರು ತಂಪು, ಭಾವನೆಗಳ ಬಿಳಿಯ ಸೊಂಪು ಸುಲಭವಾದ ಅರ್ಥದ ಕಂಪು, ಗುಣ ಗ್ರಾಹಿಯಾದ ಯಾರು ತಾನೆ ಇದನ್ನೊಲ್ಲರು ?

ಈ ಕಾವ್ಯಕ್ಕೆ ಅಗತ್ಯವಿರುವ ಕವಿತಾ ವೀಣೆಯ ತಂತಿಗಳು ಇಲ್ಲಿ ಬಾರಿಸಲ್ಪಟ್ಟಿವೆಯಾದರೂ ಅವು ಕೆಲವೇ, ಬಾರಿಸತಕ್ಕವು ಇನ್ನೂ ಇವೆ ಎಂಬುದರಿಂದ, ಇವರಿಗೆ ಆ ಸಾಧನವನ್ನು ಕೈ ಗೊಳಿಸಿರುವ ಆ ಭಾರತೀಯೇ ಅದನ್ನು ಪೂರ್ಣತಾನಗೊಳಿಸಿ, ಕನ್ನಡ ಸಾಹಿತ್ಯದಲ್ಲಿ ಅದು ವಿಪುಲವಾಗಿ ಇಂಚರಿಸುವಂತೆ ಇವರನ್ನೂ ಹರಸಲೆಂದೂ ಇವರ ನಿದರ್ಶನದಿಂದ ಗರಿದುಂಬಿ ಇನ್ನೂ ಅನೇಕ ಕಬ್ಬಿಗತಿಯರು ಹೊರಸೂಸಿ ತಮ್ಮ ಹಾಡುಗಳಿಂದ ಕನ್ನಡ ಸಾಹಿತ್ಯವನ್ನೂ ಉಕ್ಕೇರಿಸಲೆಂದೂ ಹಾರೈಸುತ್ತೇನೆ " [೨].

ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಯವರಿಂದ ಹುಟ್ಟು ಕವಿ ಎಂಬ ಅಭಿಧಾನಕ್ಕೊಳಗಾದ 'ನೆಲ್ಲಿಕಾರು ಜೈನ ಮಹಿಳೆ' ಯ ಹೆಸರು ಜೈನ ಸಮಾಜದಲ್ಲಿ ಎಲೆ ಮರೆಯ ಕಾಯಿಯಂತೆ ಹೆಸರನ್ನು ಮುಚ್ಚಿಟ್ಟು ಸದ್ದುಗದ್ದಲವಿಲ್ಲದೆ ಅವರು ಕವಿತೆಯನ್ನು ಬರೆದರು, ಬರೆಯುತ್ತಿದ್ದರು. ಮೂಡಾರು ಧರ್ಮಪಾಲ ಇಂದ್ರ " ರಾಧಮ್ಮನವರ ಬಗ್ಗೆ ಅವರ ಚೊಚ್ಚಲ ಕೃತಿ " ' ಅನಂತಮತಿ ಚರಿತೆ ' ಯಲ್ಲಿ ಹೇಳಿದ ಮಾತನ್ನು ಉದಾಹರಿಸುತ್ತಾ ' ಅರಿತವಳು ನಾನಲ್ಲವಿದನೆನ್ನೆರೆಯ ನಪ್ಪಣೆಯಂತೆ ರಚಿಸಿಹೆ ' ಎಂದು ಮೊದಲಲ್ಲಿ ತನ್ನ ಪತಿಯ ಪ್ರೇರಣೆ, ಪ್ರೋತ್ಸಾಹದಿಂದ ಈ ಮೇಲೆ ಯಾರ ಪ್ರೋತ್ಸಾಹ,ಅಪೇಕ್ಷೆ ಇಲ್ಲದಿದ್ದರೂ ಬರೆದರು. ಕೊನೆಗೆ ಆತ್ಮ ಸಂತೋಷಕ್ಕಾಗಿ ಬರೆದರು ಬರೆಯುತ್ತಲೇ ಇದ್ದರು. ಬರೆದುದು ಆಚ್ಚಾಗಬೇಕೆಂಬ ಆಸೆ ಇಲ್ಲ. ಆದರೂ ಬರೆದರು, ಪ್ರಶಸ್ತಿ ಪುರಸ್ಕಾರಗಳ ಬಯಕೆ ಇಲ್ಲ, ಕೇಳಿ ಸುಖಿಸುವ ಕಿವಿಗಳಿಲ್ಲ, ಹಾಡಿ ಹಿಗ್ಗುವ ಹೃದಯವಿಲ್ಲ. ಆದರೂ ನಿತ್ಯ ದೇವರ ದರ್ಶನಕ್ಕಾಗಿ ಪರಿಶುದ್ಧ ಹೃದಯದಿಂದ ಹೊರ ಚಿಮ್ಮಿದ ಭಜನೆ ಹಾಡುಗಳು, ಸ್ತುತಿಗಳು ಲೆಕ್ಕವಿಲ್ಲದಷ್ಟು ಈ ಹಾಡುಗಳೆಲ್ಲ ' ಸ್ವಾಂತ ಸುಖಾಯ ' " [೩].

**4.7.0 ಭುವನಹಳ್ಳಿ ಶರ್ಮರು ರಾಧಮ್ಮನವರ ಬದುಕನ್ನು ಕುರಿತು ರಚಿಸಿದ ಪದ್ಯಗಳು :-** ಭುವನಹಳ್ಳಿ ಶರ್ಮರು ರಾಧಮ್ಮ ಅಪೂರ್ಣಗೊಳಿಸಿದ ವರ್ಧಮಾನ ಚರಿತೆಯನ್ನು ಪೂರ್ಣಗೊಳಿಸುವ ಸಂದರ್ಭದಲ್ಲಿ, ಅಂದರೆ ಮಧ್ಯಂತರ ಸಂಧಿಯಲ್ಲಿ ರಾಧಮ್ಮನ ಬಾಲ್ಯ, ವಿದ್ಯಾಭ್ಯಾಸ, ಹೆತ್ತವರ ಕುರಿತು, ಸಂಸಾರ, ಕೌಟುಂಬಿಕ ಚಿತ್ರಣ ಸಾಹಿತ್ಯ ರಚನೆಗಳು ಒಟ್ಟು ರಾಧಮ್ಮನ ಹುಟ್ಟಿನಿಂದ ಸಾವಿನವರೆಗಿನ ಬದುಕಿನ ಚಿತ್ರಣವನ್ನು ಈ ರೀತಿ ಕಾವ್ಯದಲ್ಲಿ ರಚಿಸಿದ್ದಾರೆ.

ಕವಿಯತ್ರಿ ನೆಲ್ಲಿಕಾರಿನ ಮಹಿಳಾ ಮಣಿ | ಬುವಿಗೆ ರಾಧಾಮತಿಯೆಂಬ ||
ನವನಾಮಧೇಯವ ಪೊಂದುತ ಚಿನ್ನಮ್ಮ | ನವರಿಗೆ ಮಗಳಾದರವರು || ೩೪ ||

ಚಿನ್ನಮ್ಮ ತಾಯಿಯು ವೈದ್ಯಜ್ಯೋತಿಷ್ಯವ | ಚನ್ನಾಗಿ ತಿಳಿದಿರ್ದ ವಿದುಷಿ ||
ಉನ್ನತ ಸದ್ಗುಣಗಣಗಳು ಮಗಳಿಗೆ | ನನ್ನಿಯೊಳೈದುದು ಕ್ರಮದೇ || ೩೫ ||

ಜನನಿಯ ಸಂಸ್ಕಾರ ಮಗಳೊಳು ನೆಲಸುತ | ವಿನುತದಿಂ ಕವಯಿತ್ರಿಯಾಗಿ ||
ವಿನಯದೆ ಶ್ರೀ ವರ್ಮಜೈನಿ ಕೈ ಹಿಡಿಯುತ | ಮನಶುದ್ಧದಿಂ ಬಾಳಿದರಾಗ || ೩೬ ||

ಮೆರೆದ ಈ ದಂಪತಿಗಳ್ಗೆ ನಾಲ್ವರು ಪುತ್ರರು | ವರಪುತ್ರಿಯರು ಮೂವರಲ್ತೆ ||
ಹರುಷದೀ ಮಕ್ಕಳು ವಂಶ ಸಂಸ್ಕಾರದೆ | ಚಿರಕೀರ್ತಿಯಿಂ ಶೋಭಿಸಿದರು || ೩೭ ||

ಕ್ರಮದಿಂದ ಪುತ್ರರ ಹೆಸರುಗಳಿಂತಿವೆ | ವಿಮಲದ ಪದ್ಮನಾಭಾಖ್ಯ ||
ಸುಮನ ಪ್ರಭಾಕರ ಧನ್ಯಕುಮಾರ ಮೇಣ್ | ಕಮನೀಯ ಗುಣವರ್ಮಜೈನೀ || ೩೮ ||

ಹಿರಿಯನು ತಾನಾದ ಸುತಪದ್ಮನಾಭನು | ಮೆರೆವ ವಾರಿಧಿಯಾಚೆ ಪೋಗಿ ||
ಅರಿಯುತ್ತಲಧ್ಯಾತ್ಮ ಜ್ಞಾನದೆ ಶೋಭಿಸಿ | ಮೆರೆದಿಹುದತಿ ಶ್ಲಾಘ್ಯವಲ್ತೆ || ೩೯ ||

ಬೌದ್ಧ ಜೈನಾದಿಸಿದ್ಧಾಂತ ಸಂಗತಿಗಳ | ಶೋಧಿಸಿ ತಿಳಿಯುತ ನಲವಿಂ ||
ಸಾಧಿತ ಬಹು ಮಾನ್ಯ ವಿದ್ವಾಂಸರೆನಿಸುತ | ಆದರ ಜಸವೆತ್ತುತಿಹರು || ೪೦ ||

ಘನಗುಣರಾಗಿಹ ತತ್ಪದ್ಮನಾಭರು | ವಿನುತದೆ ತ್ರಿಪಿಟಕಾಚಾರ್ಯ ||
ಎನುವತಿ ಬಿರುದನು ಪೊಂದುತ ಜಗದೊಳು | ಜನಮಾನ್ಯರೆನಿಸಿಹರು || ೪೧ ||

ಭಾರತದೊಳು ಕಾಶಿ ಮೇಣಹಮದಾಬಾದು | ಸಾರುತ ಸಿಲೋನಿನೊಳಗೇ ||
ದೂರದ ಲಂಡನ್ನು ಜರ್ಮನಿಯಮೇರಿಕಾ | ವಾರಿಧಿಯಾಚೆಯ ನೆಲದೇ || ೪೨ ||

ಸಂಚರಿಸುತಲಿ ಪ್ರಾಧ್ಯಾಪಕರಾಗುತ | ಸಿಂಚಿಸುತರಿವನೆಲ್ಲರಿಗೆ ||
ಸಂಚಯ ಸತ್ಕೀರ್ತಿ ಭಾಜನರಾಗುತ | ಹಂಚುವ ಜ್ಞಾನಿಯಾಗಿಹರು || ೪೨ ||

ಎರಡನೆ ಸತ್ಪುತ್ರ ಧನ್ಯ ಕುಮಾರರು | ಮೆರೆವ ಸೋಲಾಪುರದೊಳಗೆ ||
ಪರಮಶ್ರಾವಿಕಾ ಶಾಲೆಯಲ್ಲಿಯ ಧ್ಯಾಪಕ | ಗುರುವಾಗಿ ಸೇವೆಗೈದಿಹರು || ೪೪ ||

ಮೂರನೆ ವರಪುತ್ರ ಗುಣವರ್ಮ ಜೈನಿಯು | ಚಾರು ಮಾತಾಪಿತ ಗೃಹದೇ ||
ತೋರುತ ವಾತ್ಸಲ್ಯ ವಂಶವಿಚಾರವ | ಸಾರಲು ನೆಲೆಸಿಹರಲ್ಲೀ || ೪೫ ||

ತಾಯಿಯ ನೆಲದೊಳು ಗುಣವರ್ಮ ಜೈನಿಯ | ಆಯತದೊಳು ಜಸಗಳಸೀ ||
ಶ್ರೇಯ ಪೊಂದುತ ಬಹು ಜನಪ್ರಿಯರಾಗಿ | ಕಾಯಕದಿಂ ಬಾಳುತಿಹರು || ೪೬ ||

ರೇವತಿ ರೋಹಿಣಿ ಮೇಣ್ ಯಶೋಧಾದೇವಿ | ಕೋವಿದರೀ ಮೂವರಾದ ||
ಭಾವಶುದ್ಧಿಯ ಪೆಣ್ಮಕ್ಕಳೆಂದೆನಿಸುತ | ತೀವಿ ಸದ್ಗುಣಿಗಳಾಗಿಹರು || ೪೭ ||

ನೆಲ್ಲಿಕಾರಿನ ನಾರಿ ರಾಧಾವತಿದೇವಿ | ಒಳ್ಳೆಯ ಜಿನಭಕ್ತರಾಗಿ ||
ಬಲ್ಲಿದ ಜೈನರ ಶ್ರಾವಕಾಚಾರದೆ | ನಲ್ಲದೆ ನಡೆದು ಬಂದವರು || ೪೮ ||

ಈ ಮಹಿಳಾಮಣಿ ಸಾಹಿತ್ಯದೇವಿಯ | ಪ್ರೇಮದಿಂದಾ ರಾಧಿಸುತಲಿ ||
ಶ್ರೀಮಂತ ಸಾಹಿತ್ಯ ಸೃಷ್ಟಿಯ ಮಾಡಿ ನಿ | ಸ್ಸೀಮ ಸತ್ಕೀರ್ತಿಯೈದಿಹರು || ೪೯ ||

ಕಂದಸಾಂಗತ್ಯ ಮೇಣ್ ಷಟ್ಪದಿ ವೃತ್ತಾದಿ | ಛಂದದೆ ಕಬ್ಬಂಗಳ್ ರಚಿಸೀ ||
ಚಂದದ ಕನ್ನಡ ಸಾಹಿತ್ಯದೇವಿಗೆ | ಅಂದದೊಳಲಂಕರಿಸಿಹರು || ೫೦ ||

ನನ್ನ ಭಾವನೆ ಮೇಣನಂತಮತಿಯ ಕಥೆ | ಉನ್ನತ ಷಟ್‌ಸ್ತಬಕಗಳ ||
ನನ್ನಿಯೊಳುದ್ಯಾಯನಕಥೆ ಮೊದಲಹ | ಸನ್ನುತ ಕಬ್ಬಂಗಳೊರೆದರ್ || ೫೧ ||

ಅಲ್ಲದೆ ಲಕ್ಷ್ಮೀ ಬಾಯಿಯೆನ್ನುವ ಕೃತಿಮೆ | ಣ್ಸಲ್ಲಲಿತದ ಸಂಗೀತ ||
ಪಲ್ಲವಿ ಭಜನೆಗಳಾದಿ ಗಾನಂಗಳ | ನೆಲ್ಲವ ರಚಿಸಿ ಮೆರೆದಿಹರು || ೫೨ ||

ಜಿನವರ್ಧಮಾನ ಪುರಾಣವ ಬರೆಯಲು | ಜಿನ ಚರಣವ ನೆನೆಯುತಲಿ ||
ಘನಭಕ್ತಿಯಿಂದಲಾರಂಭವ ಗೈಯುತ | ಅನುವಿನಿಂ ಬರೆಯುತಲಿರಲು || ೫೩ ||

ಶ್ರೀ ವರ್ಧಮಾನರ ಜನ್ಮಾಭಿಷೇಕದ | ತೀವಿದ ವಾರ್ತೆಯ ಬರೆವ ||
ತಾವಿನೊಳ ವಸಾನ ತಾನೈದುದಕ್ಕವಾ | ಪಾವನ ಮಹಿಳೆಗೆ ಜವದೇ || ೫೪ ||

**4.8.0 - ಮಾಹಿತಿದಾರರ ಅಭಿಪ್ರಾಯಗಳು :-** ಮಾಹಿತಿದಾರರೊಡನೆ ಮಾತನಾಡುವಾಗ ರಾಧಮ್ಮನವರು ಚತುಷ್ಪದಿ ಸಾಂಗತ್ಯ, ಷಟ್ಪದಿಯಲ್ಲಿ ಕಾವ್ಯ ರಚಿಸಲು ಇಚ್ಚಿಸಿರುವುದಕ್ಕೆ ಕಾರಣವೇನೆಂದರೆ ದೇವರಾಜ ಹೆಗ್ಗಡೆಯವರು ಹೀಗೆನ್ನುತ್ತಾರೆ. ಅಭಿಪ್ರಾಯ ಮಂಡನೆಗೆ ಭಾಮಿನಿ ಷಟ್ಪದಿಯು ಬಹಳ ಯೋಗ್ಯವಾದದ್ದು. ಇವರಲ್ಲಿ ಸಾಹಿತ್ಯಿಕ ಪರಂಪರೆಯನ್ನು ಕಾಣಬಹುದಾಗಿದೆ. ಇವರು ವಿಷಯ ತಿಳಿಯಲು ಲೋಕಜ್ಞಾನ ಪಡೆಯಲು ಹಾಗೂ ಇವರಿಗಿದ್ದ ಆಧ್ಯಾತ್ಮಿಕ ಒಲವು ಅನೇಕ ಪೌರಣಿಕ ಕೃತಿಗಳನ್ನು ಓದಿರುವುದರಿಂದ ಸಚ್ಚರಿತ್ರೆಯನ್ನು ಭೋಧಿಸಲು ಈ ಛಂದೋರೂಪಗಳು ಸೂಕ್ತವೆಂದೆನಿಸಿರಲುಬಹುದು ಎಂದಿದ್ದಾರೆ.

ಪದ್ಮನಾಭ ಶೆಟ್ಟಿ, ನೆಲ್ಲಿಕಾರು ರಾಧಮ್ಮ ಒಡನಾಡಿಯಾದ ಇವರು ಸುಮಾರ ೬೨ ವರ್ಷ ವಯಸ್ಸಿನವರು, ನಿಕಟವರ್ತಿಯಾದ ಇವರು ಹೀಗೆನ್ನುತ್ತಾರೆ. ವೃತ್ತಿಯಲ್ಲಿ ಪೋಸ್ಟ್ ಮಾಸ್ಟರ್ ಹಾಗೂ ಹಾರ್ಮೋನಿಯಂ ಮಾಸ್ಟರ್ ಆಗಿದ್ದ ಇವರು ತಮಗಿದ್ದ ಸಂಗೀತ ಜ್ಞಾನದಿಂದ ರಾಧಮ್ಮನವರಿಗೆ ಸಾಹಿತ್ಯ ರಚಿಸಲು ಪ್ರಚಲಿತ ಪದ್ಯಗಳನ್ನು ಆರಿಸಿ ಕೊಡತ್ತಿದ್ದರು. ರಾಗ ತಾಳ ಹಾಡನ್ನು ಮೊದಲೇ ನಿರ್ಧರಿಸಿ ಅವರ ಲೆಕ್ಕಾಚ್ಚಾರಕ್ಕನುಗುಣವಾಗಿ ಸಾಹಿತ್ಯವನ್ನು ರಾಧಮ್ಮನವರು ರಚಿಸುತ್ತಿದ್ದರು ಎಂಬ ಮಾತನ್ನು ಅವರು ಹೇಳುತ್ತಾರೆ.

ರಾಧಮ್ಮನಿಗೆ ವಯಸ್ಸಿನಲ್ಲಿ ಕಿರಿಯರು ಆದರೆ ಅವರನ್ನು ಬಹಳ ಹತ್ತಿರದಿಂದ ಕಂಡವರು ನೆಲ್ಲಿಕಾರಿನ ಪ್ರಭಾವತಿ ಅಮ್ಮನವರು ಇವರು ಹೀಗೆನ್ನುತ್ತಾರೆ ಕಂಡದಕ್ಕೆ, ಕೇಳಿದಕ್ಕೆ ನಿರರ್ಗಳವಾಗಿ ಏನನ್ನಾದರು ಸಾಹಿತಿಕವಾಗಿ ಅರುಹುವಂತಹ ಸಾಮರ್ಥ್ಯ ರಾಧಮ್ಮನಿಗಿತ್ತು ಸಂಸಾರದಲ್ಲಿ ಎಲ್ಲರಿಗೂ ಬೇಕಾದಂತಹ ವ್ಯಕ್ತಿ ಇವರು ಮಹಾಸಾಧ್ವಿ, ಕವಿಸರ್ವಜ್ಞನ ವ್ಯಕ್ತಿತ್ವವನ್ನುಳ್ಳವರು ' ಹೇಳೆನಲು ಹೇಳುವರು ' ತನ್ನ ಅಭಿವ್ಯಕ್ತಿ ಭಗವಂತ ನನ್ನಿಂದ ನುಡಿಸುವಂತಹ ಮಾತುಗಳು ಎನ್ನುತ್ತಾರೆ.

ನೆರೆಹೊರೆಯವರು ಹೀಗೆನ್ನುತ್ತಾರೆ ಪ್ರತಿ ಗುರುವಾರ ಬಸದಿಯಲ್ಲಿ ನಡೆಯುವ ಭಜನೆಗೆ ನಿತ್ಯವೂ ಹೊಸತಾದ ಪದ್ಯವನ್ನು ರಚಿಸಿ ಹಾಡುತ್ತಿದ್ದರು. ಒಂದು ದಿನವೂ ಪುನರಾವರ್ತನೆಗೊಳ್ಳದಂತೆ ನೋಡಿಕೊಳ್ಳುತ್ತಿದ್ದರೆಂದು.

ಮೂಡುಬಿದಿರೆಯ ಧರ್ಮಪಾಲ ಇಂದ್ರ (ಎಂ. ಡಿ. ಇಂದ್ರರೆಂದೇ) ಪ್ರಖ್ಯಾತರಾದ ಇವರು ಹೀಗೆನ್ನುತ್ತಾರೆ ಯಾವ ಕ್ಷಣದಲ್ಲಿ ಯಾವ ವಿಚಾರ ಕುರಿತು ಹೇಳುತ್ತಾರೆ, ಎಂದೆನಲು ಅಸಾಧ್ಯ ರುಬ್ಬುವ ಕಲ್ಲಿನ ನಿನಾದಕ್ಕೂ, ತಾಳಕ್ಕೂ ಅನುಗುಣವಾಗಿ ಸಾಹಿತ್ಯ ರಚನೆ ಮಾಡುತ್ತಿದ್ದರು.

ಮಗಳು ರೇವತಿ ಬಲ್ಲಾಳ್ ಹೀಗೆನ್ನುತ್ತಾರೆ ಸಾಹಿತ್ಯ ರಚಿಸಲು ಸಮಯ ಮೀಸಲು ಎಂದೇನಿಲ್ಲ ತಮ್ಮ ದೈನಂದಿನ ಚಟುವಟಿಕೆಗಳ ಅಂಗವಾಗಿಯೇ ಸಾಹಿತ್ಯ ರಚನೆ ಮಾಡುತ್ತಿದ್ದರು, ಇದರ ಫಲವೇ ಗೋಡೆಯಲ್ಲಿ ಗೀಚುವುದು ಮಸಿಯಿಂದ ಗೋಡೆಯಲ್ಲಿ ಬರೆಯುವುದು, ತುಂಡು ಕಾಗದದಲ್ಲಿ, ರಟ್ಟಿನ ತುಂಡಿನಲ್ಲಿ ಬರೆದೆಯೆಯುವುದು, ಕಾರ್ಡಿನ ಚೂರುಗಳಲ್ಲಿ ಬರೆಯುವುದು, ಸ್ಲೇಟಿನಲ್ಲಿ ರಚಿಸುವುದು. ಮನೆಯಲ್ಲಿಯ ಅನಾನುಕೂಲ ಪರಿಸ್ಥಿತಿಯಿಂದಾಗ ಕಾವ್ಯ ರಚನೆಗೆ ಪ್ರೋತ್ಸಾಹ ದೊರಕಲಿಲ್ಲ. ತಾಯಿ ರಚಿಸುತ್ತಿದ್ದ ಕಾವ್ಯವನ್ನು

ಸಂರಕ್ಷಿಸಲಾಗದೇ ಹೋದುದಕ್ಕಾಗಿ ಖೇದವನ್ನು ವ್ಯಕ್ತ ಪಡಿಸುತ್ತಾರೆ ಇಂದಿರುವ ಸವಲತ್ತುಗಳು ಅಂದಿರುತ್ತಿದ್ದರೇ ಎಂದು ನೆನಪಿಸಿಕೊಳ್ಳುತ್ತಾ ನಿಟ್ಟುಸಿರು ಬಿಡುತ್ತಾರೆ.

ಬಾಹ್ಯ ಬೋದನೆ ಇಲ್ಲದಿದ್ದರು, ಅಂತರ್ಗತ ಸಿದ್ಧಿಯು ರಾಧಮ್ಮನನ್ನು ಕಾವ್ಯ ರಚಿಸುವಂತೆ ಮಾಡಿದೆ ಎಂದು ಹಿರಿಯರಿಂದ ತಿಳಿದ ವಿಷಯವನ್ನು ಪ್ರಸನ್ನ ಇಂದ್ರರು ಹೇಳುತ್ತಾರೆ,

ಜ್ಞಾನಚಂದ್ರ ಶೆಟ್ಟಿಯವರು ಹೀಗೆನ್ನುತ್ತಾರೆ ಸಂಗೀತ ಮಾಸ್ಟರ್‌ರಾಗಿ ಸೇವೆ ಸಲ್ಲಿಸುತ್ತಿರುವ ಇವರು ರಾಧಮ್ಮವರ ಪೂಜಾ ಸಂಗ್ರಹ ಕೃತಿಯನ್ನು ಕೊಂಡಾಡುತ್ತಾರೆ. ಆ ಪದ್ಯಗಳನ್ನು ಎಷ್ಟೂ ಹೇಳಿದರೂ, ಕಲಿಸಿದರೂ ಮನಸ್ಸು ತಣಿಯದು ಎಂದು ಮನತುಂಬಿ ಹೇಳಿದರು.

ಕಾರ್ಕಳ ಹಿರಿಯಂಗಡಿ ಬಸದಿಯ ಬಳಿಯಲ್ಲಿರುವ ಭುಜಬಲಿ ಬ್ರಹ್ಮಚಾರಿ ಆಶ್ರಮದಲ್ಲಿ ಕಾರ್ಯ ನಿರ್ವಹಿಸುತ್ತಿರುವ ನಿವೃತ್ತ ಅಧ್ಯಾಪಕ ಆದಿರಾಜ ಹೆಗ್ಗಡೆ ಹೀಗೆನ್ನುತ್ತಾರೆ ರಾಧಮ್ಮನವರು ಮಹಾ ಸಾಧ್ವಿ ದಿನವು ಸಾಯಂಕಾಲ ನೆರೆಹೊರೆಯ ಸ್ತ್ರೀಯರನ್ನು ಒಟ್ಟುಗೂಡಿಸಿಕೊಂಡು ಕಾವ್ಯ ವಾಚನವನ್ನು ಮಾಡುತ್ತಾರೆ. ಇದರ ಉದ್ದೇಶ ಓದು ಬರಹ ತಿಳಿಯದ ಸ್ತ್ರೀಯರು ಕಾವ್ಯದ ಸೊಗಡನ್ನು ಆಸ್ವಾದಿಸಬೇಕು ಎಂಬುದು.

ಸಾಮಾನ್ಯವಾಗಿ ಸಾಹಿತ್ಯ ರಚನೆಗೊಂಡ ನಂತರ ಸಂಗೀತ ಹಾಕಲಾಗುತ್ತದೆ, ಆದರೆ ಕೆಲವೊಮ್ಮೆ ಕೊಟ್ಟಂತಹ ಸಂಗೀತ - ರಾಗ - ತಾಳಕ್ಕೆ ಸಾಹಿತ್ಯ ಸಂಯೋಜನೆ ಮಾಡಲಾಗುತ್ತದೆ. ಈ ರೀತಿಯನ್ನು ರಾಧಮ್ಮನವರ ಸಾಹಿತ್ಯ ರಚನೆಯಲ್ಲಿ ಕಾಣಬಹುದು. ಸಂಗೀತ ಮನಸ್ಸಿನ ಭಾವವನ್ನು ಅಂತರ್ಗತಗೊಳಿಸಿಕೊಂಡಿರುತ್ತದೆ.

ಟಿಪ್ಪಣಿಗಳು|:-

೧. ದೇವೇಂದ್ರ ಕೀರ್ತಿ ಭಟ್ಟಾರಕ ಸ್ವಾಮಿಗಳು, ಸಂಗೀತ ಪೂಜಾಷ್ಟಕ, ಪುಟ ೩.

೨. ಗೋವಿಂದ ಪೈ ವಾಙ್ಮಯ ದರ್ಶನ, (ಲೇ) ಲಕ್ಷ್ಮೀಬಾಯಿ, ಪುಟ ೧೧೪೪.

೩. ಮೂಡಾರು ಧರ್ಮಪಾಲ ಇಂದ್ರ, ಸಂಗೀತ ಪೂಜಾಷ್ಟಕ, ಪುಟ ೩.

## ೫. ' ಜೈನ ಮಹಿಳೆ ' ರಾಧಮ್ಮನವರ ಸಾಹಿತ್ಯ

**5.1.0 - ಪ್ರವೇಶ :-** ಜೈನ ಮಹಿಳೆ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿದ್ದ ರಾಧಮ್ಮನವರು ನೆಲ್ಲಿಕಾರಿನವರು ಇಪ್ಪತ್ತನೇ ಶತಮಾನದಲ್ಲಿ ಆಗಿಹೋದ ಕರ್ನಾಟಕದ ಹಿರಿಯ ಕವಯತ್ರಿಯವರ ಸಾಲಿನಲ್ಲಿ ಅಗ್ರಗಣ್ಯರಾಗಿ ಶೋಭಿಸಬೇಕಾದವರು. ಅಂತಹ ವಿಶಿಷ್ಟ ಕಾವ್ಯ ಪ್ರತಿಭೆ ಇದ್ದವರು. ಇವರ ಕೃತಿಗಳನ್ನು ಒಂದೊಂದಾಗಿ ಸ್ತುತಿಗಳು, ಹಾಡುಗಳು, ಭಕ್ತಿಗೀತೆಗಳು ಎಂದು ತಿಳಿದು ಬರುತ್ತದೆ. ಇವುಗಳಲ್ಲಿ ಹೆಚ್ಚಿನವು ಇನ್ನೂ ಸಂಗ್ರಹವಾಗಿ ಪ್ರಕಾಶನಗೊಂಡಿಲ್ಲ.

ಕನ್ನಡ ಮತ್ತು ಸಂಸ್ಕೃತದ ಆಳವಾದ ಅಭ್ಯಾಸದ ಕಾವ್ಯ ರಚನೆಗೆ ಅಗತ್ಯ ಎಂಬ ಮಾತನ್ನು, ರಾಧಮ್ಮನ ಸಾಹಿತ್ಯವನ್ನು ಓದಿದಾಗ ಸುಳ್ಳು ಎಂದು ತಿಳಿಯಬಹುದು, ಕಾರಣ ಕೇವಲ ೩ ನೇ ತರಗತಿಯವರೆಗೆ ವಿದ್ಯಾಭ್ಯಾಸವನ್ನು ಗೈದ ಇವರು ಅದ್ಭುತವಾದ ಸಾಹಿತ್ಯ ರಚನೆಯನ್ನು ಮಾಡಿರುವುದನ್ನು ಗಮನಿಸಬಹುದು. ಇವರ ಕವಿತಾ ಶಕ್ತಿ ಶಾಲಾ, ಕಾಲೇಜುಗಳ ವಿದ್ಯಾಭ್ಯಾಸದ ಹಿನ್ನೆಲೆಯಿಂದ ಬಂದುದಲ್ಲವೆಂದೂ ಅದು ಅವರ ಹುಟ್ಟು ಪ್ರತಿಭೆ, ಎಂದು ತಿಳಿದಾಗ ಅಭಿಮಾನವು ಗೌರವು ಉಂಟಾಗುವುದು. ಅವರ ಬಗ್ಗೆ ಹೆಚ್ಚು ತಿಳಿಯಬೇಕೆಂದು ಪ್ರಯತ್ನಿಸಿದಾಗ ಅವರ ಅಸಾಮಾನ್ಯ ಪ್ರತಿಭೆಯ ಪರಿಚಯವಾಗುತ್ತದೆ. ಧಾಧಮ್ಮನವರು ಸಾಹಿತ್ಯ ರಚನೆಯನ್ನು ಯಾವುದೇ ಪ್ರತಿಫಲದ ಅಪೇಕ್ಷೆ ಅಥವಾ ಪ್ರಸಿದ್ಧಿ, ಲಾಭದ ಆಶೆಯಿಲ್ಲದೆ ಕೇವಲ ಆತ್ಮ ಸಂತೋಷಕ್ಕಾಗಿ ಬರೆದರು ಎಂದು ಅವರ ಕಾವ್ಯದಲ್ಲಿ ಕಾಣುತ್ತೇವೆ.

**ಕವಯತ್ರಿಯ ರಾಧಮ್ಮನವರ ಸಾಹಿತ್ಯ ಕೃತಿಗಳ ಕುರಿತು :-**

೧. ನನ್ನ ಭಾವನೆ - ೧೯೪೪ ( ಪ್ರಕಟಿತ, ಅನುವಾದ )

೨. ಅನಂತಮತಿ ಚರಿತೆ - ೧೯೨೨ ( ಪ್ರಕಟಿತ ಕಾವ್ಯ, ಸ್ವತಂತ್ರ ರಚನೆ )

೩. ಲಕ್ಷ್ಮೀ ಬಾಯಿ - ೧೯೩೧ ( ಪ್ರಕಟಿತ ಕಾವ್ಯ, ಸ್ವತಂತ್ರ ರಚನೆ )

೪. ಸಂಗೀತ ಪೂಜಾ ಸಂಗ್ರಹ - ೧೯೫೯ ( ಪ್ರಕಟಿತ ಕೀರ್ತನೆಗಳು, ಸ್ವತಂತ್ರ ರಚನೆ )

೫. ಸಂಗೀತ ಪೂಜಾಷ್ಟಕ - ೧೯೮೬ ( ಪ್ರಕಟಿತ ಕೀರ್ತನೆಗಳು, ಸ್ವತಂತ್ರ ರಚನೆ )

೬. ವರ್ಧಮಾನ ಪುರಾಣ - ೧೯೯೩ ( ಪ್ರಕಟಿತ ಮಹಾಕಾವ್ಯ, ಸ್ವತಂತ್ರ ರಚನೆ - ಅಪೂರ್ಣ )

೭. ಷಡ್ಗುಚ್ಛ ( ಅಪ್ರಕಟಿತ )

೮. ನೀಲಿ ಕುಮಾರಿ ಚರಿತೆ ( ಅಪ್ರಕಟಿತ )

೯. ಜಯ ಕುಮಾರ ಚರಿತೆ ( ಅಪ್ರಕಟಿತ )

೧೦. ಉದ್ದಾಯನ ಚರಿತೆ ( ಅಪ್ರಕಟಿತ )

ನೆಲ್ಲಿಕಾರು ಜೈನ ಮಹಿಳೆಯ ಬರಹದ ಕುರಿತು :- ' ನೆಲ್ಲಿಕಾರು ಜೈನ ಮಹಿಳೆ ' ರಾಧಮತಿಯವರ ಬರಹದ ಕುರಿತು ಸಮಗ್ರ ಅಧ್ಯಯನ ಮಾಡಲು ಹೊರಟಾಗ ಈ ಮೇಲಿನ ಕೃತಿಗಳೆಲ್ಲವು ಕವಯತ್ರಿ ರಾಧಮ್ಮನಿಂದ ರಚಿತಗೊಂಡಿರುವುದು ಎಂಬುದು ತಿಳಿದು ಬಂದಿತು. ಆದರೆ ಅಧ್ಯಯನಾರಂಭಗೊಂಡ ನಂತರದಲ್ಲಿ ಸಂಶೋಧನೆಗೆ ತೊಡಗಿದಾಗ ನನಗೆ ದೊರಕಿರುವ ಮಾಹಿತಿಗಳು ಭಿನ್ನವಾಗಿದೆ.

ಮೇಲೆ ಹೇಳಲಾದ ಕೃತಿಗಳಲ್ಲಿ ಅನಂತಮತಿ ಚರಿತೆ - ೧೯೨೩ ರಲ್ಲಿ ರಚನೆಗೊಂಡಿರುವುದು, ಇದು ಭಾಮಿನಿ ಷಟ್ಪದಿಯಲ್ಲಿ ರಚನೆಗೊಂಡಿದ್ದು ಅವರ ಚೊಚ್ಚಲ ಕೃತಿ ಎಂದು ಮಾಹಿತಿಗಳಿಂದ ತಿಳಿದು ಬರುತ್ತದೆ [೧]. ಆ ನಂತರದಲ್ಲಿ ೧೯೩೧ರಲ್ಲಿ 'ಲಕ್ಷ್ಮೀ ಬಾಯಿ' ಎಂಬ ಕಾವ್ಯವನ್ನು ರಚಿಸಿದರು [೨]. ಇದು ಚತುಷ್ಪದಿ ಛಂದಸ್ಸಿನಲ್ಲಿದೆ. ಮುಂದೆ 'ನನ್ನ ಭಾವನೆ ' ( ೧೯೪೪ ) ಅನುವಾದಿತ ಕೃತಿ, ಪ್ರಕಟಗೊಂಡಿದೆ. ಆದರೆ ಈ ಕೃತಿಯನ್ನು ಕವಯತ್ರಿ ರಾಧಮ್ಮನವರು ಎಲ್ಲಾ ಕೃತಿಗಳಿಂದ ಮೊದಲು ಅನುವಾದಿಸಿದ್ದಾರೆ. ಇದು ಅವರು ಕಾವ್ಯ ರಚಿಸಲು ಮಾಡಿದ ಪ್ರಯತ್ನದ ಫಲವೆನ್ನುವುದಾಗಿ ಗೋಚರಿಸುತ್ತದೆ.

ಸಂಗೀತ ಪೂಜಾ ಸಂಗ್ರಹ ೧೯೫೫ ಮತ್ತು ಸಂಗೀತ ಪೂಜಾಷ್ಟಕ ೧೯೮೬,ರಲ್ಲಿ ಪ್ರಕಟಗೊಂಡಿದೆ. ಆದರೆ ಇವುಗಳಲ್ಲಿ ಜಿನ ಸ್ತುತಿಯ ಅನೇಕ ಪದ್ಯಗಳಿರುವುದನ್ನು ಕಾಣುತ್ತೇವೆ.

ವರ್ಧಮಾನಚರಿತೆ ಎಂಬ ಮಹಾಕಾವ್ಯ ೧೯೬೩ ರಲ್ಲಿ ಪ್ರಕಟಗೊಂಡಿದೆ. ಇದು ಸಾಂಗತ್ಯ ಛಂದಸ್ಸಿನಲ್ಲಿ ರಚನೆಗೊಂಡಿದೆ. ಆದರೆ ಈ ಪದ್ಯವನ್ನು ಅರ್ಧ ಬರೆದು ಮುಗಿಸುವಾಗಲೇ ಕವಯತ್ರಿ ರಾಧಮ್ಮನವರು ದೈವಾಧೀನರಾದರು ಈ ಕಾವ್ಯವನ್ನು ಪೂರ್ಣಗೊಳಿಸದವರು ಕವಿ ಭುವನ ಹಳ್ಳಿ ಶರ್ಮ.

ಅಪ್ರಕಟಿತ ಕೃತಿ ಷಡ್ಗುಚ್ಛ ಜೀರ್ಣಾವಸ್ಥೆತೆಯ ಸ್ಥಿತಿಯಲ್ಲಿ ವೈ ಉಮಾನಾಥ ಶೆಣೈ ಅವರಿಗೆ ದೊರಕಿದ್ದು ಅವರು 'ಕನ್ನಡ ಸಾಹಿತ್ಯಕ್ಕೆ ಮೂಡಬಿದ್ರೆಯ ಕೊಡುಗೆ ' ಎಂಬ ಪುಸ್ತಕದಲ್ಲಿ ಇದರ ವಸ್ತುವಿನ ಕುರಿತು, ಛಂದಸ್ಸಿನ ಕುರಿತು ಉಲ್ಲೇಖಿಸಿದ್ದಾರೆ [೩]. ಅದನ್ನು ಯಥಾವತ್ತಾಗಿ ಸಂಪ್ರಬಂಧದಲ್ಲಿ ಬಳಸಿಕೊಂಡಿದ್ದೇನೆ [೪].(ಷಡ್ಗುಚ್ಛ - ಈ ಕೃತಿಯು ನನಗೆ ನೋಡಲು ದೊರಕಿರುವುದಿಲ್ಲ.)

' ಜಯಕುಮಾರ ಚರಿತೆ ' ಮತ್ತು ' ಉದ್ದಾಯನ ಚರಿತೆ ' ಇವು ಅಪ್ರಕಟಿತ ಕೃತಿಗಳು. ಇವುಗಳ ಕುರಿತು ಯೆಲ್ಲಿಯೂ ಮಾಹಿತಿ ದೊರಕಿರುವುದಿಲ್ಲ. ಇದರ ಕುರಿತು ರಾಧಮ್ಮನ ಮಕ್ಕಳಲ್ಲಿ ವಿಚಾರಿಸಿದಾಗ ಅವರಿಗೂ ಆ ಕೃತಿಗಳ ಬಗೆಗೆ ಯಾವುದೇ ಮಾಹಿತಿ ಇಲ್ಲದಿರುವುದು ಕಂಡು ಬಂದಿತು. ಮುಂದೆ ತಮ್ಮ ಅಜ್ಜನ ಮನೆಯಲ್ಲಿ ಅಂದರೆ ಬೆಳ್ತಂಗಡಿ ತಾಲೂಕು, ಗುರುವಾಯನ ಕೆರೆ ಪುಸ್ತಕಗಳನ್ನುಳ್ಳ ಅನೇಕ ಕಪಾಟುಗಳಿದ್ದವು, ಆದರೆ ಮನೆಗೆ ಮನೆಯೇ ಗೆದ್ದಲು ಹಿಡಿದು ಕುಸಿದು ಬಿದ್ದಿರುವ ಕಾರಣ ಅಲ್ಲಿರುವ ಪುಸ್ತಕಗಳು ನಾಶವಾಗಿರಬಹುದು ಎಂದು ಅವರ ಮಗಳು ಖೇದವನ್ನು ವ್ಯಕ್ತಪಡಿಸುತ್ತಾರೆ.

ಇನ್ನೂ ಇಲ್ಲಿ ಉಲ್ಲೇಖಗೊಂಡಿರುವ ಇನ್ನೊಂದು ಕೃತಿ ' ನೀಲಿ ಕುಮಾರ ಚರಿತೆ ' ಇದು ಕವಯತ್ರಿ ರಾಧಮತಿಯವರ ಕೃತಿಯಾಗಿರದೆ ಅವರ ಹಿರಿಯ ಮಗಳಾದ 'ರೇವತಿ ಬಲ್ಲಾಳ ' ರ ಕೃತಿಯಾಗಿದೆ.

ಈ ಶತಮಾನದ ಆರಂಭದ ದಶಕಗಳಿಂದ ಸುಮಾರು ೫೦ ವರುಷ ಒಬ್ಬ ಜೈನ ಮಹಿಳೆ ಎಲೆ ಮರೆಯ ಹೂವಾಗಿ ಅರಳಿ, ಕಾಯಾಗಿ ಮಡಿದು, ಹಣ್ಣಾಗಿ ಬಾಳಿದರು. ರಾಧಮ್ಮನವರು ಜನ ಮೆಚ್ಚಲಿ ಎಂದು ಕೃತಿ ರಚಿಸಲಿಲ್ಲ. ತನ್ನ ಸಂತೋಷಕ್ಕಾಗಿ ಹಾಡಿಕೊಂಡರು. ಭಕ್ತಿಯೇ ಅವರ ಕಾವ್ಯದ ಸ್ಥಾಯಿ, ಯಾವ ಪ್ರಶಸ್ತಿ , ಪುರಸ್ಕಾರ,

ಗೌರವ ಮನ್ನಣೆಯೂ ಅವರು ಬದುಕ್ಕಿದ್ದಾಗ ದೊರೆಯಲಿಲ್ಲ. ರಾಧಮ್ಮನಿಗೆ ಅವೆಲ್ಲ ಬೇಕೂ ಇರಲಿಲ್ಲ. ಅವರೆಲ್ಲಾ ಲೌಕಿಕ ಆಮಿಷಗಳಿಂದ ಆಸೆಯಿಂದ ದೂರವಿದ್ದರು ಅವರ ಅನೇಕ ಸಾಹಿತ್ಯ ಅಚ್ಚಾಗದೇ ಉಳಿದಿರುವುದನ್ನು ಗಮನಿಸಬಹುದು. ಅವರ ಅನೇಕ ಕೃತಿಗಳನ್ನು ರಚಿಸಿದರೂ ಬಹು ಪಾಲು ಉಳಿದೇ ಇಲ್ಲ. ಆದರೆ ಮುದ್ರಿತಗೊಂಡ ಬರವಣಿಗೆ ಕಡಿಮೆಯೇನಲ್ಲ.

" ಅರವತ್ತೆಂಟು ವರ್ಷದ ತುಂಬು ಜೀವನ ಸಾಧಿಸಿದ ರಾಧಮ್ಮ ಕಂದ ವೃತ್ತ, ಸಾಂಗತ್ಯ, ಷಟ್ಪದಿ ಯಾವುದೇ ಛಂದಸ್ಸಿನಲ್ಲಿ ಸುಲಿದ ಬಾಳೆಯ ಹಣ್ಣಿನಂದದಿ ಕಾವ್ಯ ರಚಿಸುತ್ತಿದ್ದರು " [೪]. ಅವರ ಬಿಡಿ ಕವಿತೆಗಳು ಗುರುದೇವ, ವಿವೇಕಭ್ಯುದಯ, ಸನ್ಮತಿ, ಜಿನವಾಣಿ ಮುಂತಾದ ಪತ್ರಿಕೆಗಳಲ್ಲಿ ಬಹುವಾಗಿ ಅಚ್ಚಾಗಿವೆ.

ಅನೇಕ ದೇವರ ನಾಮಗಳನ್ನು ರಚಿಸಿದ್ದಾರೆ ಹಾಗೂ ಅವುಗಳಿಗೆ ಶಾಸ್ತ್ರೀಯ ಸಂಗೀತದ ರಾಗ, ತಾಳಗಳನ್ನು ಅಳವಡಿಸಿ ರಚಿಸಿರುವುದು ಕಂಡುಬರುತ್ತದೆ. ಅವರ ಸಾಹಿತ್ಯ ರಚನೆಯ ಹಾಗೂ ಅವರಿಗಿದ್ದ ಸಂಗೀತಜ್ಞಾನದ ಅರಿವಿನ ಆಳವೂ ತಿಳಿಯುತ್ತದೆ. ಇವರ ನೂರಾರು ಪದ್ಯಗಳ ರಚನೆ ಅತ್ಯಂತ ಸರಳ ರೀತಿಯಲ್ಲಿದ್ದು ಜನಜೀವನಕ್ಕೆ ಬೇಕಾದ ಸತ್ವವನ್ನು ಒದಗಿಸಿಕೊಡಬಲ್ಲವಾಗಿವೆ.

ಇವರ ಕವಿತೆಗಳು ' ಕರ್ನಾಟಕ ಕೇಸರಿ' ' ಕನ್ನಡ ಸಹಕಾರಿ ' ಮೊದಲಾದ ಪತ್ರಿಕೆಗಳಲ್ಲಿ ಮೂಡಿ ಬರುತ್ತಿದ್ದವು. ಆನೇಕ ಶಾಲಾ ಪಠ್ಯಗಳಲ್ಲಿ ಇವರ ಕವನಗಳನ್ನು ಸೇರಿಸಿದ್ದಿದೆ.೧೯೨೪, ೧೨೨೬ ರಲ್ಲಿ ಪುತ್ತೂರಿನಿಂದ ಪ್ರಕಟವಾಗುತ್ತಿದ್ದ ' ಕರ್ನಾಟಕ ಕೇಸರಿ ' ಲಕ್ಷೀಬಾಯಿ ಎಂಬ ನೀತಿ ಬೋಧಕ ಕಿರು ಕಾವ್ಯ ಧಾರವಾಹಿಯಾಗಿ ಬರುತ್ತಿತ್ತು.

ಆರಂಭದಲ್ಲಿ ಇವರ ಸಾಹಿತ್ಯವೆಲ್ಲವನ್ನೂ ಸಂಗ್ರಹಿಸತೊಡಗಿದ ಶ್ರೀ ದೇವಕುಮಾರ ಜೈನ ಅವರು ಹೀಗೆ ಹೇಳಿದ್ದಾರೆ, " ಬಯಸಿ ಬಂದವರಿಗೆ ಕವಿತೆ ಬರೆದು ಕೊಡುತ್ತಿದ್ದರು ಇವರದು ಹುಟ್ಟು ಪ್ರತಿಭೆ ಉಕ್ಕಿದಾಗ, ಪ್ರೇರಣೆ ಸಿಕ್ಕಿದಾಗ, ಕ್ಯಾಲೆಂಡರಿನ ಹಿಂಬದಿಯ ಖಾಲಿ ಜಾಗದಲ್ಲಿ, ಮಕ್ಕಳ ಸ್ಲೇಟಿನಲ್ಲಿ, ಪುಸ್ತಕದ ಹಿಂದುಳಿದ ಪುಟಗಳಲ್ಲಿ, ತುಂಡು ಕಾಗದವಲ್ಲಿ ತೋಚಿದ್ದನ್ನು ಗೀಚಿದ್ದರು, ಶಾಯಿಯೇ, ಸೀಸದ ಕಡ್ಡಿಯೇ, ಸಿಕ್ಕಿದ, ಉಪಕರಣದಲ್ಲಿ, ಉಕ್ಕಿದ ಕವಿತೆಯನ್ನು ತುಂಬಿ ಬಿಡುತ್ತಿದ್ದರು" [೫]. ಜೈನ್ ಅವರು ರಾಧಮ್ಮನವರ ಸಾಹಿತ್ಯ ಸಂಗ್ರಹವನ್ನು ನೋಡಿದಾಗ ಆಶ್ಚರ್ಯವಾಯಿತೆನ್ನುತ್ತಾರೆ, ಬರೆದು ಗೀಚಿದ ಕರಡು ಪ್ರತಿಗಳನ್ನು ನೋಡಿ ದುಃಖದೊಂದಿಗೆ ಚಕಿತರಾದರು ಎಂದೆನ್ನುತ್ತಾರೆ . " ಪ್ರತಿಭಾನ್ವಿತ ಮಹಿಳೆಯ ಕಾವ್ಯ ಸಂಪತ್ತು ಬಿದ್ದು ಕೊಳೆಯುತ್ತಿದೆ. ಸಾಹಿತ್ಯ ಪ್ರಪಂಚಕ್ಕೆ ಆತ್ಮಾನಂದವನ್ನು ಕೊಡುವ ಕೃತಿರತ್ನಗಳು ಕತ್ತಲಲ್ಲಿ ಮಬ್ಬಾಗಿದ್ದುವು ಎಂದು ಆದರೆ ಅದರ ರಕ್ಷಣೆಯನ್ನು ಮಾಡದಿರುವುದರ ಪರಿಣಾಮ ಅವುಗಳೆಲ್ಲಾ ಚೆಲ್ಲಾಪಲ್ಲಿಯಾಗಿರುವುದು ದುಃಖದಾಯಕವಾಗಿದೆ " [೬] .

ರಾಧಾಮತಿಯವರು ಬರೆದ ಕವಿತೆಗಳು ನೂರಾರು ಜುಗಲ್ ಕಿಶೋರ್ ಮುಖ್ತಾರರು ಬರೆದ ' ಮೇರಿ ಭಾವನಾ |' ಎಂಬುದರ ಕನ್ನಡ ಅನುವಾದ ' ನನ್ನ ಭಾವನೆ' ಎಂಬುದೇ ಅವರ ಮೊದಲ ಕೃತಿಯಾಗಿದೆಯೆಂದು ತಿಳಿದು ಬರುತ್ತದೆ ದೇವ ಕುಮಾರ ಜೈನ್‌ರವರು ಇದೇ ಅಭಿಪ್ರಾಯ ಪಡುತ್ತಾರೆ. ಈ ಕೃತಿಯು ಆಧ್ಯಾತ್ಮಿಕ ತತ್ವವನ್ನು ತಿಳಿಸುವ ಕೃತಿಯಾಗಿದೆ. ಇದರಲ್ಲಿ ಆತ್ಮ ಮತ್ತು ಶರೀರಗಳ ಸಂಬಂಧವೇನು? ಇದಕ್ಕೆ ಪರಿಹಾರವೇನು ? ಎಂಬ ಜ್ಞಾನೋದಯವು ಇದರಿಂದ ಲಭಿಸುತ್ತದೆ. ' ನನ್ನ ಭಾವನೆ ' ' ಮೇರಿ ಭಾವನ ' ದ ಅನುವಾದ - ಕೆಳಗಿನ ಪದ್ಯಗಳಲ್ಲಿ ಈ ವಿವರಗಳನ್ನು ಕಾಣುತ್ತೇವೆ.

**5.1.1 - ನನ್ನ ಭಾವನೆ :-** ಎಂಬತ್ತನಾಲ್ಕು ಲಕ್ಷ ಜೀವರಾಶಿಗಳಲ್ಲಿ ಶ್ರೇಷ್ಠವಾದದ್ದು ಮಾನವ ಜನ್ಮ, ಈ ಪವಿತ್ರವಾದ ಮತ್ತು ಮೋಕ್ಷ ಪಡೆಯುವಲ್ಲಿ ಸೋಪಾನವಾದ ಈ ಜನ್ಮದಲ್ಲಿ ಯಾವ ರೀತಿ ಬದುಕಬೇಕು ಬದುಕು ಎನ್ನುವುದರ ನಿಜವಾದ ಅರ್ಥವೇನು ? ಎನ್ನುವುದನ್ನು ಕವಯತ್ರಿಯು ಸವಿವರವಾಗಿ ಈ ಪದ್ಯ ಮುಖೇನ ತಿಳಿಸಿದ್ದಾರೆ. ಯಾರು ಕಾಮ, ಕ್ರೋಧ, ಮೋಹ, ಲೋಭ, ಮದ ಮತ್ಸರವೆಂಬ ಷಡ್ ವೈರಿಗಳನ್ನು ಜೈಯಿಸುತ್ತಾನೋ ಅವನು ಜಿನ ಎಂದೆನಿಸಿಕೊಳ್ಳುತ್ತಾನೆ. ತ್ರೈಲೋಕವನ್ನು ಜಯಿಸಿದ ವಿಜಯ ಎಂದೆನಿಸಿಕೊಳ್ಳುತ್ತಾನೆ. ' ಎದ್ಭಾವಂ ತದ್ಭವತಿ ' ಎಂಬಂತೇ ಹರಿ, ಹರ, ಬ್ರಹ್ಮ ಜಿನೇಶ್ವರ ಬುದ್ಧ ಇವರ ಸಾಲೋಖ್ಯವನ್ನು ಸಾಮಿಪ್ಯವನ್ನು ಪಡೆಯುವ ಮೂಲಕ ಶ್ರೇಷ್ಠವಾದ ಸಾಯುಜ್ಜವನ್ನು ಹೊಂದುತ್ತಾನೆ. ಎಂಬುದನ್ನು ವಿವರಿಸಿದ ಲೇಖಕಿ ಅಂತಹ ಭಾಗ್ಯವನ್ನು ಪಡೆಯುವದಕ್ಕೆ ಸೂಕ್ತ ವೇದಿಕೆಯನ್ನು ಈ ಪದ್ಯಗಳಲ್ಲಿ ನಿರೂಪಿಸಿದ್ದಾರೆ.

ಹಠಯೋಗ ಸಿದ್ಧಿಯಿಂದ ಯಾವುದನ್ನೂ ಸಾಧಿಸಿಕೊಳ್ಳಬಹುದು ಎನ್ನುವುದನ್ನು ಕವಯತ್ರಿಯು ತಿಳಿಸಿದ್ದಾರಲ್ಲದೆ. ಅಂತಹ ಸಾಧನೇ ನನಗೆ ಆದರ್ಶ ಪ್ರಾಯ. ಅವನ ಜೀವನ ಕ್ರಮವೇ ಪ್ರಾಪಂಚಕರಿಗೆ ಮಾರ್ಗದೀಪಿಕೆ. ಅವನೇ ದೀನರ ದಾರಿದ್ರ್ಯವನ್ನು ನಿವಾರಿಸುವವನು. ಸಾಧು ಸಜ್ಜನರಿಗೆ ಜ್ಞಾನ ನಿಧಿಯನ್ನು ನೀಡುವವನು ಅವನನ್ನು ಸೇವಿಸುವ ಹಾಗು ಅವನ ಸಹವಾಸ ನನಗೆ ದೊರೆಯಲಿ ಇದರಿಂದ ಪರರ ಏಳಿಗೆಗೆ ಕರುಬದೆ, ಪರರ ದ್ರವ್ಯವನ್ನು ಅಪೇಕ್ಷಿಸದೆ ಪರರ ಸಹಾನುಭೂತಿಯನ್ನು ಪಡೆಯದೆ ನನ್ನ ಬದುಕು ಕೊನೆಗೊಳ್ಳಲ್ಲಿ ಬದುಕಿರುವ ತನಕ ಯಾರಿಗೂ ನೋವನ್ನು ಉಂಟು ಮಾಡದೆ ಎಲ್ಲರಿಗೂ ಆದರ್ಶ ಪ್ರಾಯವಾಗಿ ಬದುಕುವ ಭಾಗ್ಯ ಪ್ರಾಪ್ತಿಸಲಿ ಎಂದು ಪ್ರಾರ್ಥಿಸಿದ್ದಾರೆ.

ವಿಷಯಗಳಾಶೆಯನುಳಿಯುತಲಿನುದಿನ | ಸೌಮ್ಯ ಭಾವವನು ಧರಿಸುತಲಿ ||
ನಿಶಿದಿನ ಪರಹಿತಕಾರ್ಯದಿ ತತ್ಪರ - | ನಾಗುತೆ ತನುಮನ ಸವಿಸುತಲಿ || ೫ ||

ತೊರೆದಿರಲೀ ಮನ ಅಹಂಕಾರವನು | ಕ್ರೋಧವನುಳಿಯಲಿ ಸರ್ವರೊಳು ||
ಕರುಬದಿರಲಿ ಪರರೇಳ್ಗೆಯ ಕಾಣುತ | ಶಾಂತಿ ನೆಲೆವೀಡಾಗಿರಲಿ || ೬ ||

ಕಾಲಕಾಲಕೆ ಮಳೆಗರೆವುತಲಿ | ಬೆಳೆಗಳು ಬೆಳೆಯುತಲೀ ||
ಹಾಳು ಕ್ಷಾಮದ ಭೀತಿಯು ಜಗವನು | ವ್ಯಾಪಿಸದಂತಿರಲೀ || ೨೬ ||

ನೂರುವರುಷವೇ ಬದುಕಿರಲೈಸಾ | ನಲ್ಲದಿರ್ದೊಡಿಂದೇ ||
ಸರಿಯಲಿ ಯಮಪುರಕಾಗಲು ಇರಲಿ | ಶಾಂತ ಭಾವವೊಂದೇ || ೧೨ ||

ಬೆದರಿಸಿ ಅಥವಾ ಆಸೆಯ ತೋರ್ದೊಡು | ನ್ಯಾಯಮಾರ್ಗದಿಂದ
ಕದುದೆ ವಿಶ್ವಲಭಾವದೊಳಿರಲೀ | ಹೃದಯ ಧೈರ್ಯದಿಂದ || ೧೮ ||

ಮನುಷ್ಯನು ಹೇಗಿರಬೇಕು, ಷಡ್ವೈರಿಗಳನ್ನು ಜಯಿಸುವುದಗತ್ಯ ಈ ವೈರಿಗಳನ್ನು ಜಯಿಸುದೆಂದರೆ ತ್ರಿಲೋಕವನ್ನು ಜಯಿಸಿದಂತೆ ಸ್ವಾರ್ಥವನ್ನು ತ್ಯಾಗ ಮಾಡಿದ ಕಠಿಣ ತಪಸ್ವಿಯಾದ ಮಹಾಜ್ಞಾನಿಯ ಕೀರ್ತಿಸುವೆನು. ಯಾರಿಗೂ ಹಿಂಸೆಯನ್ನು ಮಾಡದೆ ಸುಳ್ಳು ನುಡಿಯದೆ ಪರಧನ ಬಯಸದೆ ಸಂತೋಷವೆಂಬ ಅಮೃತವನ್ನು ಹೀರುತ್ತ ಅಹಂಕಾರವನ್ನು ತೊರೆದು, ಕ್ರೋಧವನುಳಿದು ಸರ್ವರಲ್ಲಿ, ಪರರ ಏಳಿಗೆಯ ಬಗ್ಗೆ ಮತ್ಸರಿಸದೆ ಶಾಂತಿಯ ನೆಲೆಯಾಗಲಿ ಎಂದೆನುತ ಸರಳವಾದ ಸತ್ಯದ ವ್ಯವಹಾರವನ್ನೆಸಗುತ ಪರೋಪಕಾರ ಗೈಯ್ಯಲು ಪ್ರೇರೇಪಿಸುತ ಮನಸ್ಸು ಭೂಮಿಯಲಿ ಮೈತ್ರಿ ಭಾವವು ಸರ್ವರಲಿ ತೋರುತ ಮನದಲಿ ಬಡವರಿಗಾಗಿ ಕರುಣೆಯನು ಹೊಂದಿರಲಿ ಕೆಟ್ಟ ಹಾದಿಯ ತುಳಿಯದಿರಲಿ ಮನಸ್ಸು ಶಾಂತತೆಯಿಂದ ಕೂಡಿರಲಿ.

ಕೃತಘ್ನಳಾನಾಗದೆ ಆವಾಗಲು ಎ -| ನ್ನಾಯು ತೀರುವನಕಾ ||
ಸುತರಾಂ ದ್ರೋಹವ ಬಗೆಯದಿರಲಿ ಮನ | ಜೀವನಾಂತ್ಯದನಕಾ ||

ಮನುಷ್ಯನು ಹೇಗಿರಬೇನ್ನುತ್ತಾ ತಾನು ಹೇಗಿರಲು ಇಚ್ಛಿಸುತ್ತೇನೆ ಎನ್ನುವುದನ್ನು ಬಹಳ ಸ್ಪಷ್ಟವಾಗಿ ಮನಬಿಚ್ಚಿ ಹೇಳುವುದನ್ನು ಮೇಲಿನ ಪದ್ಯದ ಭಾವ ವ್ಯಕ್ತಪಡಿಸುತ್ತದೆ. ಬದುಕಿರುವವರೆಗೂ ಶಾಂತ ಚಿತ್ತದಿಂದಿರಲು ಇಚ್ಛಿಸುವ ಬಯಕೆಯನ್ನು ಹೊಂದಿರುವುದು ಸ್ಪಷ್ಟವಾಗಿರುತ್ತದೆ. ಕವಿತೆ ಚಿಕ್ಕದಾದರು ಇದರ ತಿರುಳು ಸವಿಯಾಗಿದೆ. ಸೊಗಸಾಗಿದೆ, ಸರಳವೂ ಸುಗಮವೂ ಮನೋಜ್ಞವೂ ಆಗಿದೆ.

ಯಾರೇ ತನ್ನನ್ನು ದೂಷಿಸಿದರು ಅಥವಾ ಹೊಗಳಿದರೂ, ಐಶ್ವರ್ಯ ನನ್ನನ್ನು ಅರಸಿ ಬಂದರೂ, ಅಥವಾ ನನ್ನನ್ನು ತ್ಯಜಿಸಿ ಹೋದರೂ ಅದನ್ನು ಏಕಪ್ರಕಾರವಾಗಿ ಸ್ವೀಕರಿಸುವ ಚೈತನ್ಯ ನನ್ನಲ್ಲಿರಲಿ ಎಂದು ಆಶಿಸುತ್ತಾ, ಬದುಕಿದೆ ಎನ್ನುವುದಕ್ಕಿಂದ ಹೇಗೆ ಬದುಕಿದೆ ಎಂಬ ಅರ್ಥವನ್ನು ಸರ್ವರೂ ತಿಳಿದು ಕೊಳ್ಳುವಂತಾಗಲಿ, ನೂರು ವರ್ಷ ಬದುಕಿರುವುದು ಮುಖ್ಯವಲ್ಲ, ಅಥವಾ ಇಂದೇ ನನ್ನ ಆಯುಷ್ಯ ತೀರಿದರೂ ಗಣ್ಯವಲ್ಲ, ಬದುಕು ಎನ್ನುವುದರ ನಿಜಾರ್ಥವನ್ನು ನಾನು ಪ್ರತಿ ಪಾದಿಸುವಂತಾಗಲಿ ಎಂದು ಆಶಿಸಿದ್ದಾರೆ.

ಬೆದರಿಸಿ ಅಥವಾ ಆಸೆಯ ತೋರ್ದೊಡು | ನ್ಯಾಯ ಮಾರ್ಗದಿಂದ ||
ಕದಲದೆ ನಿಶ್ಚಲ ಭಾವದೊಳಿರಲಿ | ಹೃದಯ ಧೈರ್ಯದಿಂದ ||

ಪ್ರಲೋಭನೆಗೆ ಒಳಗಾಗದೆ ಯಾವ ಬೆದರಿಕೆಗೂ ಮಣಿಯದೆ ನಿಶ್ಚಲ ಮನಸ್ಕಳಾಗಿ ತಾನು ಬದುಕುವಂತಾಗಲಿ. ಪ್ರಪಂಚದಲ್ಲಿ ಮನುಷ್ಯಳಾಗಿ ಅನುಭವಿಸಬೇಕಾದ ಸುಖವೆಲ್ಲವೂ ಪ್ರಾಪ್ತಿಸಿದಾಗಲೂ ಅಥವಾ ದುಃಖ ಒದಗಿಬಂದರೂ ಸುಖದ ಕಾಲದಲ್ಲಿ ಹಿಗ್ಗದೇ, ದುಃಖ ಬಂದಾಗ ಕುಗ್ಗದೇ ಮಹಾ ಮೇರುವಿನಂತೆ ನನ್ನ

ನಿರ್ಧಾರ ಅಚಲವಾಗಿರಲಿ. ಯಾವುದೇ ದುಷ್ಟ ಶಕ್ತಿಗಳ ಪರಿಸರದಲ್ಲಿದ್ದರೂ ದುಷ್ಟ ಸ್ವಭಾವದವರ ಸಹವಾಸಿಯಾಗುವ ಅನಿವಾರ್ಯತೆ ಒದಗಿ ಬಂದರೂ ಒಂದಿನಿತು ಕದಲದೆ ತನ್ನ ಹೃದಯದಲ್ಲಿ ಶಿಷ್ಮ ತನವನ್ನು ಶಿಥಿಲಗೊಳಿಸದೆ ಚಂಚಲ ರಹಿತಳಾಗಿ ಆಯುರ್ಮಾನ ಪೂರ್ತಿ ಬದುಕಿ ಈ ಭವ ಸಾಗರವನ್ನು ದಾಂಟಿ ಜಿನ ಪದವನ್ನು ಸೇರುವಂತಾಗಲಿ ಎಂದಿದ್ದಾರೆ.

ತಾನು ಹೇಗಿರಬೇಕು ಎಂದು ಕಲ್ಪಿಸಿಕೊಂಡ ಕವಯತ್ರಿ ಪ್ರಾಂಪಚಿಕರ ಬದುಕಿನತ್ತಲೂ ತಮ್ಮ ದೃಷ್ಟಿಯನ್ನು ಹರಿಸಿದ್ದಾರೆ. ಆ ಮೂಲಕ ಚಿಂತಿಸಿದ್ದಾರೆ ಎನ್ನುವುದು ವೇದ್ಯವಾಗುತ್ತದೆ. ಸದಾಚಾರ ಸಂಪನ್ನರಾದ ಮನುಕುಲಜರಿಂದ ಸುಕ್ಷೇಮಕಾರಕರಾದ ಸುಭಿಕ್ಷತೆಯಿಂದ ಕೂಡಿದ ಸುಭದ್ರ ಪೃಥ್ವಿ ನಿರ್ಮಾಣವಾಗುತ್ತದೆ. ಅಲ್ಲಿ ಯಾವುದಕ್ಕೂ ಕೊರತೆಯಿಲ್ಲ, ಯಾವುದರಿಂದಲೂ ಭಯವಿಲ್ಲ ಎನ್ನುವುದನ್ನು ಪ್ರತಿಪಾದಿಸುವ ಲೇಖಿಕಿ ಹೋಮ, ಹವನ, ಪೂಜೆ, ಪುರಸ್ಕಾರ ಗಳೇ ಮೊದಲಾದ ದೇವತಾರ್ಚನೆಗಳಿಂದಲೂ ಸಚ್ಚರಿತ್ರತೆಯಿಂದಲೂ ಇದನ್ನು ಸಾಧಿಸಿಕೊಂಡು ಪ್ರಾ ಪಂಚಿಕರು ನಿರ್ಭೀತಿಯಿಂದ ಸುಖಿಗಳಾಗಿ ಜೀವಿಸಲಿ ಎಂದು ಹಾರೈಸಿದ್ದಾರೆ ಅಲ್ಲದೆ, ಅಂತಹ ಉತ್ತಮ ಪರಿಸ್ಥಿತಿಗಾಗಿ ಯಾವ ರೀತಿಯ ಹಿನ್ನಲೆ ಇರಬೇಕು ಎನ್ನುವುದರ ಮೇಲೆ ಬೆಳಕು ಚೆಲ್ಲಿದ್ದಾರೆ.

ಪರಮ ಅಹಿಂಸಾಧರ್ಮವು ಜಗದಲಿ | ಪಸರಿಸಿ ನಾಲ್ದೆಸೆಗೆ ||
ಸರುವ ಹಿತವ ಮಾಡುತ ನೆರೆದಿರಲೈ | ಚಿರದಿನ ಬಾಳಿ ಮಿಗೆ || ೨೯ ||
ಧರ್ಮನಿಷ್ಟೆ ನ್ಯಾಯ ಮಾರ್ಗದಿಂ | ಪ್ರಜೆಗಳ ಪಾಲಿಸುತ ||
ನಿರ್ಮಲ ಸತ್ಯದಿ ಮೆರೆಯಲಿ ರಾಜನು | ಜಗದೊಳನವರತ || ೨೩ ||

ರಾಜನೀತಿ ಕೋವಿದರಾದ ಮಹಾರಾಜರಿಂದ ಈ ಭೂಮಿ ಆಳಲ್ಪಟ್ಟು ರಾಜ್ಞರಾದ ಮಂತ್ರಿವರ್ಗೀಯರಿಂದ ಯೋಗ್ಯ ಸಲಹೆ ನೀಡಲ್ಪಟ್ಟು ಪ್ರಜೆಗಳನ್ನು ತನ್ನ ಮಕ್ಕಳಂತೆ ಪಾಲಿಸುವ ಮಹಾರಾಜರಿಂದ ಈ ಭೂಮಿ ಪಾವನವೆನಿಸಿಕೊಳ್ಳಲಿ ಯಾವುದೇ ಮಾರಕ ರೋಗಗಳು ಈ ಪ್ರಂಪಚದಲ್ಲಿ ತಾಂಡವವಾಡದೇ ಇರಲಿ, ಯಾವುದೇ ತೆರನಾದ ತಾಪಗಳಿಲ್ಲದೇ ಪ್ರಜೆಗಳು ನೆಮ್ಮದಿಂದ ಬಾಳುವಂತಾಗಲಿ. ಎಲ್ಲರ ಬಾಳನ್ನು ಬೆಳಗಿಸುವ ಅಹಿಂಸಾ ಮಂತ್ರ ವಾಕ್ಯವೇ ಈ ಪ್ರಪಂಚಾದ್ಯಂತ ಮೆರೆಯುತ್ತಿರಲಿ. ಪ್ರಜೆಗಳೆಲ್ಲರು ಸುಮನಸ್ಕರಾಗಿರಲಿ, ಅಪ್ರಿಯವಾದ ಸತ್ಯಗಳು ತಪ್ಪಿಯೂ ಬರದಿರಲಿ ಕಟುಕತನವು ನಾಶವಾಗಲಿ ಎಂದು ತಮ್ಮ ಭಾವನೆಯನ್ನು ವ್ಯಕ್ತಪಡಿಸಿದ ಕವಯತ್ರಿಯು ಇಷ್ಟೆಲ್ಲಾ ಯೋಗ್ಯತೆಯುನ್ನು ಪ್ರಧಾನಿಸಿದ ಜೈನಧರ್ಮದ ಮಹತ್ವಿಕೆಯನ್ನು ರೂಪಿಸುವುದರೊಂದಿಗೆ ಗಾಂಧೀಜಿಯವರು ಕಂಡ ರಾಮರಾಜ್ಯದ ಬಗ್ಗೆ ತಮ್ಮ ಕಲ್ಪನೆಯನ್ನು ಮೂಡಿಸಿ, ಜನತೆಗೆ ತನ್ನದೇ ಆದ ಮನದಭಿಪ್ರಾಯವನ್ನು ವಿವರವಾಗಿ ಅಭಿವ್ಯಕ್ತಿಸಿದ್ದಾರೆ.

**5.1.2 - ಅನಂತಮತಿ ಚರಿತೆ :-** ಮೂರು ಸಂಧಿಗಳಿದ್ದ ೮೮ ಪದ್ಯಗಳಿರುವ ಕಾವ್ಯ ಚಿಕ್ಕ ಕಾವ್ಯ ಇದು ಜೈನ ಮಹಿಳೆಯ ಮೊದಲ ಕೃತಿ ಅದನ್ನು ಗಂಡನ ಪ್ರೋತ್ಸಾಹದಿಂದ ರಚಿಸಿದ್ದಾರೆ ' ಅರಿತವಳು ನಾನಲ್ಲ ಪಿದನೆನ್ನೆರೆಯನ್ನಪ್ಪಣೆಯಂತೆ ರಚಿಸಿಹೆ ' ಅಂದು ರಚಿಸಲು ಆರಂಭಿಸಿದ ಅವರ ಲೇಖನಿಯ ಶಾಹಿ ಮುಗಿಯಲೇ

ಇಲ್ಲ ಅವರು ಕೊನೆಯ ಯಾತ್ರೆ ಹೊರಡುವವರೆಗೂ ನಿರಂತರವಾಗಿ ಬರೆದರು. ನಿರ್ಮಲ ಭಾವನೆಯಿಂದ ರಚಿಸಿದರು ದೈವದ ಪ್ರೇರಣೆಯಿಂದ ಸೃಷ್ಟಿಸಿದರು.

ಈ ಕೃತಿಯ ಒಬ್ಬ ಶ್ರೇಷ್ಠಿಯ ಮಗಳ ಕಥೆ. ಆಗರ್ಭ ಶ್ರೀಮಂತಳು ಆಗಿರುವ ಈಕೆಯ ಮೂಲಕ ಪೂರ್ವಾರ್ಜಿತ ಕರ್ಮವು ಉದಯಕ್ಕೆ ಬಂದಾಗ ಪುಣ್ಯವೋ ಪಾಪವೋ ಅವುಗಳ ಫಲವನ್ನು ಅನುಭವಿಸಲೇಬೇಕೆಂಬ ನೀತಿಯನ್ನು ಈ ಕಾವ್ಯದಲ್ಲಿಯ ಕತೆಯಿಂದ ತಿಳಿಯಬಹುದಾಗಿದೆ.

ಅನಂತಮತಿ ಚರಿತೆಯನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ ಕವಯತ್ರಿ ತನಗೆ ಹೇಳಬೇಕೆಂದೆನಿಸಿದ ವಿಚಾರಗಳನ್ನು ಬಹಳ ಸ್ಪಷ್ಟವಾಗಿ ಹೇಳಿದ್ದಾರೆ. ಅನುವಾದ ಕೃತಿಯಾದ ನನ್ನ ಭಾವನೆಯ ನಂತರ ಸ್ವರಚಿತ ಮೊದಲ ಕಾವ್ಯ ಅನಂತಮತಿ ಚರಿತೆ ತಾನು ಈ ಕೃತಿಯನ್ನು ಬರೆದ ಉದ್ದೇಶವೇನು ಎಂಬುದನ್ನು ಈ ಪದ್ಯದಲ್ಲಿ ಹೇಳಿದ್ದಾರೆ.

ಅರಿತವಳು ನಾನಲ್ಲವಿದನೇ
ನ್ನೆರೆಯ ನಪ್ಪಣೆಯಿಂದರಚಿಸಿಹೆ
ಸರಸ ಸದ್ಗುಣವಂತರಿರೆ ದೋಷಗಳ ನೀರುಳಿದು |
ಸುರುಚಿರದ ಹಾಲುಂಬಹಂಸವ
ಪರಿಯೊಳಗೆ ಸುಗುಣಗಳನಾರಿಸಿ
ಭರದಿ ಸ್ವೀಕರಿಸುವದು ಮೋದದೊಳಿರದೆ ಅನವರತಾ |

ಈ ಮಾತುಗಳಲ್ಲಿ ಕವಯತ್ರಿಯ ಸಜ್ಜನಿಕೆಯನ್ನು ಕಾಣುತ್ತೇವೆ. ತನ್ನಲ್ಲಿ ಪ್ರತಿಭೆ ಪಾಂಡಿತ್ಯವಿದ್ದರೂ ತನಗೇನು ತಿಳಿದಿಲ್ಲವೆಂದು ತನ್ನ ಪತಿಯ ಪ್ರೋತ್ಸಾಹ ಕಾರಣದಿಂದಾಗಿ ಕಾವ್ಯ ರಚಿಸಿದೆ ಎಂದು ಸುಂದರವಾದ ಉಪಮೆಯ ಮೂಲಕ ಕ್ರಿಯೆ ಗ್ರಹಿಸುವ ಬಗೆಯನ್ನು ವಿವರಿಸಿದ್ದಾರೆ. ಜ್ಞಾನಿಯಾದವನು ತನ್ನಲ್ಲಿ ಅಪಾರವಾದ ಜ್ಞಾನಸಂಪತ್ತು ಇದ್ದರೂ ತಾನು ಇನ್ನೂ ತಿಳಿಯುವುದಕ್ಕಿದೆ. ತನಗಿಂತ ಪ್ರತಿಭಾವಂತರು ಈ ಪ್ರಪಂಚದಲ್ಲಿ ಅಪಾರ ಸಂಖ್ಯೆಯಲ್ಲಿದ್ದಾರೆ. ಅವರೆಲ್ಲರ ಅನುಭಾವಗಳನ್ನು ತರ್ಕಬದ್ಧವಾಗಿ ಅರ್ಥೈಯಿಸಿಕೊಂಡಾಗಲೇ ಪರಿಪೂರ್ಣತೆ ಸಿದ್ಧಿಯಾಗುತ್ತದೆ. ಎಂಬ ವಿಶಾಲ ಹೃದಯವನ್ನುಳ್ಳ ಕವಯತ್ರಿಯು " ಕೆಲವಂ ಬಲ್ಲವರಿಂದ ಕಲ್ತು, ಕೆಲವಂ ಶಾಸ್ತ್ರಗಳಿಂದ ಕೇಳುತಂ,ಕೆಲವಂ ಮಾಳ್ಪವರಿಂದ ಕಂಡು, ಕೆಲವಂ ಸಜ್ಞಾನದಿಂದ ನೋಡುತಂ, ಕೆಲವಂ ಸಜ್ಜನ ಸಂಗದಿಂದರಿಯಲ್ ಸರ್ವಜ್ಞಪಂ " ಎಂಬ ಸೋಮೇಶ್ವರ ಶತಕದ ಧ್ಯೇಯೋಕ್ತಿಯನ್ನೇ ದೃಢವಾಗಿ ನಂಬಿದ ಈ ಮಹಾನುಭಾವೆ ತಾನು ರಚಿಸಿದ ಕೃತಿಯಲ್ಲಿ ಪ್ರಾಪಂಚಿಕರು ಜಾಗೃತವಾಗಬೇಕಾದ ಸ್ಥಿತಿಗತಿಯನ್ನು ಸ್ಥೂಲವಾಗಿ ವಿವರಿಸಿದ್ದಾರೆ. ತನ್ನ ಅಮೃತಧಾರೆಯಂತಹ ನುಡಿಮುತ್ತುಗಳ ಪ್ರವಾಹವನ್ನೇ ಸೃಷ್ಟಿಸಿದ ಈಕೆ ತಪ್ಪು ಒಪ್ಪುಗಳ ಬಗ್ಗೆ ಲೌಕಿಕರ ಮುಂದೆ ಸ್ಪಷ್ಟವಾಗಿ ತಿಳಿಸಿದ್ದಾರೆ. ಸ್ವೀಕರಿಸುವವರು ಹಂಸವು ದುಗ್ಧವನ್ನು ಮಾತ್ರ ಸೇವಿಸಿ, ಹಾಲನ್ನು ಹಾಗೆಯೇ ಉಳಿಸುವಂತೆ ಈ ಪದ್ಯ ಮಾಧ್ಯಮದಲ್ಲಿ ಇರತಕ್ಕ ಒಳಿತನ್ನು ಆಸ್ವಾದಿಸಿ, ಕೆಡುಕುಗಳೇನಾದರು ಇದ್ದಲ್ಲಿ

ಅದನ್ನು ತ್ಯಕ್ತಗೊಳಿಸಿ ಸಚ್ಚರಿತ್ರರಾಗಿ ಬಾಳುವೆ ನಡೆಸಿದಾಗ ನನ್ನ ಶ್ರಮ ಸಾರ್ಥಕ ಎಂಬ ಭಾವನೆಯನ್ನು ತನ್ನ ಕೃತಿಯ ಅಂತ್ಯದಲ್ಲಿ ಮನೋಜ್ಞವಾಗಿ ಪ್ರಸ್ತುತ ಪಡಿಸಿದ್ದಾರೆ.

ಎಷ್ಟು ಹೇಳಿದರೇನು ಶ್ವಾನನ |
ಸೊಟ್ಟ ಬಾಲವ ನಳಿಗೆಯೊಳಗಿಡೆ |
ನೆಟ್ಟಗಾಗುವುದುಂಟೆ ಮರ್ಕಟನಿಂಗೆ ರತ್ನವನು |
ಕೊಟ್ಟರದು ಫಲವುಂಟೆ ಖೂಳಗೆ |
ಶ್ರೇಷ್ಠನುಡಿ ರಚಿಸುವುದೇ ನೀರೊಳ |
ಗಿಟ್ಟ ಹೋಮದ ಸರಿಯೊಳಾದುದು ನೃಪನಿಗಾನೀತಿ || ೧೪ ||

ಅನಂತಮತಿಯೆಂಬ ಸಾಧ್ವಿಮಣಿ ಈ ಕಾವ್ಯದ ಕಥಾನಾಯಕಿಯು ಅಷ್ಟಮದಗಳಲ್ಲೊಂದಾದ ಕಾಮದಿಂದ ಉನ್ಮತ್ತನಾದ ಮಹಾರಾಜನಿಗೆ ಪರಿಪರಿಯ ನೀತಿ ವಾಕ್ಯಗಳನ್ನು ಪೂರ್ವಕಾಲದಲ್ಲಿ ನಡೆದ ಘಟನಾವಳಿಗಳೊಂದಿಗೆ ವಿಧವಿಧವಾಗಿ ತಿಳಿಸಿಹೇಳಲಾಗಿದೆ. ಕಾಮಾಂಧನಾದ ಮಹಾರಾಜನ ಪಾಲಿಗೆ ಈ ನೀತಿ ಕೇವಲ ನಿರರ್ಥಕವಾಯಿತು ಎಂಬುದನ್ನು ಸುಂದರವಾದ ಉದಾಹರಣೆಯೊಂದಿಗೆ ವಿವರಿಸಿದ್ದಾರೆ. ಸೊಟ್ಟಗಾಗಿಯೇ ಇರು ನಾಯಿಯ ಬಾಲವನ್ನು ಸರಿಪಡಿಸುವ ಛಲವನ್ನಾಂತು ನಳಿಗೆಯೊಳಗಿರಿಸಿದರೆ ಅದು ಖಂಡಿತ ಸರಿಯಾಗಲಾರದು, ಆ ಪರಿಶ್ರಮ ನಿರರ್ಥಕ. ಅಂತೆಯೇ ಯಾವುದೇ ವಸ್ತುವಿನ ಮೌಲ್ಯವನ್ನು ತಿಳಿದುಕೊಳ್ಳಲು ಅಶಕ್ತವಾದ ಮಂಗನಿಗೆ ಮಾಣಿಕ್ಯದ ಮಹಿಮೆ ಅರ್ಥವಾದೀತೆ, ಅದೇ ರೀತಿ ದುಷ್ಟನು ದುರ್ಮಾಗಿಯೂ ದುಷ್ಟತ್ವವನ್ನೇ ಸಂಗಮಿಸಿಕೊಂಡ ಕಡು ಖೂಳ ನೃಪಾಲನಿಗೆ ಆಸಾಧ್ವಿ ಮಣಿಯ ಸುಶೀಲತ್ವದ ವಿಚಾರವಾಗಲಿ, ನೀತಿ ವಾಕ್ಯಗಳ ಅರ್ಥವಾಗಲಿ ಆದೀತೆ , ಅಂತೆಯೇ ಅನಂತಮತಿಯ ಸಕಲ ಬೋಧನೆಗಳು ನೀರಲ್ಲಿಟ್ಟ ಹೋಮದಂತಾಯಿತೇ ವಿನಃ ಯಾವುದೇ ಸತ್ಪರಿಣಾಮವನ್ನು ಬೀರಲಿಲ್ಲ ಎನ್ನುವುದೇ ಈ ಪದ್ಯದ ಮತಿತಾರ್ಥ.

ಉರಗನಿಗೆ ಪಾಲೆರೆಯಲದು ತ |
ನ್ನಿರವ ಬಿಡುವುದೆ ಸೆಟ್ಟು ಪಾಕದ |
ಪರಿಯನರಿವುದೆ ಬೇವಿನಲಿ ಮಧುವಿರಿಸಿ ಸೇವಿಸಲೂ ||
ವರ ಮಧುರತರವಹುದೆ ಧರ್ಮವು |
ದುರುಳರಿಗೆ ಸರಿಬಹುದೇ ಪಾಷಾ |
ಣದಲಿ ನೀರೆರೆದೊಳ್ನಿರರ್ಥಕವವನಿಯಲಿನಿರತಾ || ೧೬ ||

ಹೀಗೆ ಕವಯಿತ್ರಿ ರಾಧಮ್ಮ ಹಲವು ಪದ್ಯಗಳಲ್ಲಿ ಸನ್ನಿವೇಶಕ್ಕನುಸಾರವಾಗಿ ಸಚ್ಚರಿತ್ರೆಯನ್ನು ಬೋದಿಸುವುದರ ಮೂಲಕ ಒಬ್ಬ ಸಂಸ್ಕಾರ ಬಾಹಿರನಾದ ವ್ಯಾಧನ ಹಿಡಿತದ ಹೊತ್ತಿನಲ್ಲೂ ಧೃತಿಗೆಡದೆ ತಾನು

ದುರ್ಬಲಳು ಎಂದು ಹತಶಳಾಗದೆ ಸ್ಥಿತಿಪ್ರಜ್ಞತೆಯನ್ನುಕಾಯ್ದುಕೊಳ್ಳುವುದರ ಮೂಲಕ ಅವನಲ್ಲಿ ಸದ್ಭಾವನೆಯನ್ನು ಮೂಡಿಸುವುದಕ್ಕಾಗಿ ಹಲವು ತೆರನಾಗಿ ವಿನಂತಿಸಿ ಅಲ್ಲದೆ ಅನೇಕ ದೃಷ್ಟಾಂತ ಸಹಿತ ಭೋಧನೆ ಮಾಡುವುದರೊಂದಿಗೆ ತನ್ನ ಪವಿತ್ರವಾದ ಮಾನವನ್ನು ಕಾಯ್ದುಕೊಳ್ಳುವಲ್ಲಿ ಯಾವ ರೀತಿ ಧೈರ್ಯದಿಂದ ಅನಂತಮತಿ ವ್ಯವಹರಿಸಿದಳು ಎಂಬುವುದನ್ನು ಆ ಪಾತ್ರ ಚಿತ್ರಣದ ಮೂಲಕ ಪ್ರಪಂಚದ ಪ್ರತಿಯೊಬ್ಬ ಮಹಿಳೆಗೆ ಜಾಗೃತಿಯನ್ನು ಮೂಡಿಸಲು ಈ ಕಾವ್ಯ ಮುಖೇನ ಬೋದಿಸಲು ಪ್ರಯತ್ನಿಸಿದ್ದಾರೆ.

ತನಗೆ ತಾನೇ ತನ್ನ ಮಾನವ |
ಅನುಪಮದವ್ರತಶೀಲಗಳನಾ |
ವನಜಮುಖಿ ಪಾಲಿಸುತ ಸತ್ಯಾಗ್ರಹದ ಶಾಂತಿಯನು ||
ವಿನಯದಿಂ ಕೈ ಕೊಂಡು ಧರ್ಮವ |
ಘನತೆಯಿಂ ರಕ್ಷಿಸಿದ ಸದ್ಗುಣ |
ಮಣಿಗೆಯೆಣೆಯಾರೆಂದು ಪೊಗಳಿದರಖಿಲಜನನಿಕರಾ || ೨ ||

'ಅನಂತಮತಿ ಚರಿತೆ '| ಈ ಕಿರು ಕಾವ್ಯವನ್ನು ರಚಿಸಿದ ಕವಯತ್ರಿಯ ಮನೋಧರ್ಮವನ್ನು ಅಭ್ಯಾಸಿಸುತ್ತಾ ಹೋದ ಹಾಗೆ ಹಂತ ಹಂತದಲ್ಲೂ ಜನ ಜಾಗೃತಿಯನ್ನು ಭೋಧಿಸಿದ ರೀತಿ, ವೇದ್ಯವಾಗುತ್ತದೆ. ಅಂದಿನ ಕಾಲಘಟ್ಟದಲ್ಲಿ ಅಹಿಂಸೆ, ಶಾಂತಿಯನ್ನೇ ಪ್ರತಿಪಾದಿಸಿ ಯಶಸ್ವಿಗಳಾದ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು ನಡೆಸುತ್ತಿದ್ದ ಸತ್ಯಾಗ್ರಹ ಜನರ ಜಾಗೃತಿಗೆ ಮಾಧ್ಯಮವಾದಂತೆ ಈ ಕವಯತ್ರಿಯ ಮನದಲ್ಲೂ ಗಾಢವಾದ ಪ್ರಭಾವವನ್ನು ಬೀರಿತು ಎನ್ನುವುದು ಅರ್ಥವಾಗುತ್ತದೆ. ಅಂತಹ ಸತ್ಯಾಗ್ರಹವನ್ನೇ ತಾನು ಈ ಸಮಾಜದ ವ್ಯವಸ್ಥೆಯ ಹಾಗೂ ಅಬಲೆ ಎಂದೇ ಪರಿಗಣಿಸಲ್ಪಟ್ಟ ಸ್ತ್ರೀ ಸಮುದಾಯದ ಉದ್ಧಾರಕ್ಕಾಗಿ ಮಾಡಬೇಕು ಎಂದು ತೀರ್ಮಾನಿಸಿ ಈ ರೀತಿಯ ಪದ್ಯ ಮಾಧ್ಯಮದೊಂದಿಗೆ ಅನಂತಮತಿ ಎಂಬ ಸ್ತ್ರೀ ಪಾತ್ರವನ್ನು ನಿರೂಪಿಸುವುದರ ಮೂಲಕ ಒಂದು ಚರಿತ್ರೆಯೆಂಬ ಕೃತಿಯನ್ನೇ ಸೃಷ್ಟಿಸಿ ಅದು ಭೋಧ್ಯಮಾಧ್ಯಮದಲ್ಲಿ ಸದಾ ಜೀವಂತವಾಗಿರತಕ್ಕ ಸಕಲ ಯೋಗ್ಯತೆಯನ್ನೂ ನೀಡಿದ್ದಾರೆ ಎನ್ನುವುದಕ್ಕೆ ಎರಡು ಮಾತಿಲ್ಲ.

ಭಾರತೇಯರ ಭಾಗ್ಯ ಸಂಪದ |
ಮೇರೆವಿೞರಲಿ ಸತ್ಯ ನೀತಿಯೆ |
ಸಾರಲಾಜಯ ಮಾತೆದಾರಿಣಿಯೊಳಗೆ ಸಜ್ಜನರಾ |
ವಾರ ಹೆಚ್ಚುತಲಿರಲಿ ದುರುಳರು |
ಕ್ರೂರತನಗಳನುಳಿದು ಸದ್ಗುಣ |
ಕಾರರಾಗುತ ಮೆರೆದಿರಲಿ ಸದ್ಧರ್ಮದಲಿ ನಿರತಾ || ೨೩ ||

ಭವ್ಯ ಪರಂಪರೆಯೆನ್ನೊಳಗೊಂಡ ಈ ನಮ್ಮ ಭಾರತದೇಶವು ಎಂತಹ ಪ್ರಜೆಗಳನ್ನು ಹೊಂದಿರಬೇಕು ಎನ್ನುವುದನ್ನು ಈ ಪದ್ಯದಲ್ಲಿ ಕವಯತ್ರಿಯು ಆಶಯಿಸುವ ಮೂಲಕ ವ್ಯಕ್ತಪಡಿಸಿದ್ದಾರೆ. ಜನ್ಮತಃ ಯಾರೂ ದುಷ್ಟರಾಗಿರುವುದಿಲ್ಲ. ಪರಿಸರದ ಪ್ರಭಾವವು ಅಥವಾ ಕರ್ಮದ ಸೆಳೆತವು ದುಷ್ಟತ್ವ ಎಂಬ ಕ್ರೌರ್ಯದಿಂದಾಗಿ ದುರುಳರು ಎನಿಸಿಕೊಂಡವರು ಸನ್ನಡತೆಗಳನ್ನು ರೂಪಿಸಿಕೊಂಡು ಶಿಷ್ಟತ್ವವನ್ನು ಪ್ರಧಾನಗೊಳಿಸುವುದರ ಮೂಲಕ ದುರುಳ ಸ್ವಭಾವವನ್ನು ಉಳಿದರೆಂದಾದರೆ ಸದಾಚಾರಿಗಳ ಆವಾರ ಹೆಚ್ಚುತ್ತದೆ ಎನ್ನುವುದು ಇವರ ಅಭಿಪ್ರಾಯ. ಇದರಿಂದ ಭವ್ಯ ಭಾರತದ ಭಾಗ್ಯ ಸಂಪದವು ಹೆಚ್ಚುತ್ತದೆ ಅಲ್ಲದೆ ಕೀರ್ತಿವು ಮೇರು ಸದೃಶ್ಯವಾಗಿ ರಾರಾಜಿಸುತ್ತದೆ ಎಂದು ತಿಳಿಸಿದ್ದಾರೆ. ಅಲ್ಲದೆ ಉದಾತ್ತ ಗುಣಗಳುಳ್ಳ ಜೈನರಲ್ಲಿ ಒಂದು ವಿಶೇಷ ಸ್ವಭಾವವು ಹೇಗೆ ಜನರಲ್ಲಿಸದ್ಗುಣಗಳನ್ನು ಭೋಧಿಸುತ್ತದೆ ಎನ್ನುವುದನ್ನು ಪ್ರತಿಪಾದಿಸಿದ್ದಾರೆ. ದುಷ್ಟನನ್ನು ನಿಗ್ರಹಿಸುವುದಲ್ಲ ಅವನಲ್ಲಿರುವ ದುಷ್ಟತ್ವವನ್ನು ನಿಗ್ರಹಿಸಿ ಅವನನ್ನು ತಿದ್ದಿ ಸದ್ಗುಣಿಯನ್ನಾಗಿ ರೂಪಿಸುತ ತಮ್ಮ ಜೈನ ಧರ್ಮದ ಮಹತ್ತಿಕೆಯನ್ನು ಮರೆದಿದ್ದಾರೆ.

ದುಷ್ಟ ಕಾಳೋರಗನ ಪಡೆಯನು |
ಮೆಟ್ಟಿ ಜೀವಿಸಬಹುದು ಹರಿಯನು |
ಮುಟ್ಟಿ ಹಿಡಿತರಬಹುದು | ಕಾಡ್ಗೋಣಗಳ ಹಿಂಡುಗಳು ||
ಅಟ್ಟಿಬರಲದಕಟ್ಟಬಹುದಾ |
ಶ್ರೇಷ್ಟ ಮಾರ್ಗದೊಳೊರ್ತಿಸುವ ನರ |
ಶಿಷ್ಟರಿಂಗತಿಕಷ್ಟ ದುರ್ಜನಸಂಗವವನಿಯಲಿ || ೧೭ ||

ದುಷ್ಟರಿರುವ ಈ ಸಮಾಜದಲ್ಲಿ ಶಿಷ್ಟರು ಬದುಕುವುದು ಎಷ್ಟು ದುಸ್ತರವಾದುದು ಎಂಬುದನ್ನು ಈ ಪದ್ಯದಲ್ಲಿ ಹೇಳಿದ್ದಾರೆ . ಸತ್ಯವಂತರಿಗೆ ಬದುಕುವುದು ಬಹು ಕಷ್ಟ ಎಂಬುದು ಇಂದಿನ ಸಮಾಜದ ವ್ಯವಸ್ಥೆಯಾಗಿದೆ ಎಂದು ಸಮಾಜದಲ್ಲಿರುವ ಜನರ ರೀತಿಯ ಕುರಿತು ಹೇಳಿದ್ದಾರೆ. ಪ್ರಪಂಚವು ದ್ವಂದ್ವಮಯವಾದದ್ದು ಸುಖ ದುಃಖ, ನಷ್ಟ -ಇಷ್ಟ, ದುಷ್ಟ - ಶಿಷ್ಟ, ಹೀಗೆ ಅನೇಕ ಉದಾಹರಣೆಗಳನ್ನು ನಾವು ಕಾಣುತ್ತೇವೆ. ಸಾದಾಚಾರ ಸಂಪನ್ನರಾದ ಸದ್ಗುಣಿಗಳಿಗೆ ದುರ್ಗಿಣಿಗಳಿಂದ ಯಾವ ರೀತಿಯ ಮಾರಕ ಸನ್ನಿವೇಶಗಳು ಒದಗಿ ಬರುತ್ತದೆ ಎನ್ನುವುದನ್ನು ಉದಾರಣೆಯ ಮೂಲಕ ಕವಯತ್ರಿಯು ಇಲ್ಲಿ ಚಿತ್ರಿಸಿದ್ದಾರೆ. ಸತ್ಯದ ಅಸ್ತಿತ್ವವನ್ನು ಮಿಥ್ಯವು ಆವರಿಸಿ, ಮಿಥ್ಯವೇ ಸತ್ಯವೆನಿಸುವುದು ಒಂದು ವಿಧ ಶಿಷ್ಟರನ್ನು ಗಮನಿಸಿಯೇ ಅಥವಾ ಅಂಕೆಗೆ ಒಳಪಡಿಸಿಕೊಂಡು ದುಷ್ಟರು ವಿಜೃಂಭಿಸುವುದು ಇನ್ನೊಂದು ವಿಧ ಆದರೆ ಸತ್ಯ ಎನ್ನುವುದಕ್ಕೆ ಖಂಡಿತ ಸಾವಿರುವುದಿಲ್ಲ. ಅದೇ ರೀತಿ ಶಿಷ್ಟರ ಸಚ್ಚರಿತತೆಯೂ ಯಾರಿಂದಲೂ , ಯಾವುದರಿಂದಲೂ ನಾಶ ಹೊಂದುವಂತದಲ್ಲ ಆದರೂ ದುರ್ಮಾರ್ಗಿಗಳೇ ಅತುಳ ಸಂಖ್ಯೆಯಲ್ಲಿರುವ ಈ ಕಾಲಘಟ್ಟದಲ್ಲಿ ಒಬ್ಬ ಸಂಭಾವಿತನಿಗೆ ಬದುಕ ಎಷ್ಟು ದುಸ್ತರ ಎನ್ನುವುದನ್ನು ಈ ರೀತಿ ಪ್ರತಿಪಾದಿಸಿದ್ದಾರೆ. ಕಾಳೋರಗನ ಹೆಡೆಯನ್ನು ಮೆಟ್ಟಿ ಅದನ್ನು ಒಬ್ಬ ಸಂಭಾವಿತನಿಗೆ ಬದುಕಬಹುದು, ಮಾತ್ರವಲ್ಲ ಅದರ ದಂತಪಂಕ್ತಿ ಲೆಕ್ಕಿಸುವಂತಹ ಸಾಹಸವನ್ನು ನಡೆಸಿಕೊಳ್ಳಬಹುದು, ಕಾಡುಕೋಣಗಳು ಅಟ್ಟಿಸಿಕೊಂಡು ಬರುವಾಗ ಅದನ್ನು ಪ್ರತಿಭಟಿಸಿ ಯಶಸ್ವಿಗಳಾಗಬಹುದು, ಆದರೆ ಈ ಪ್ರಪಂಚದಲ್ಲಿ,

ಸಚ್ಚರಿತ್ರೆಯನ್ನು ಕಾಯ್ದುಕೊಂಡು ಸುಶೀಲರಾಗಿ ಬದುಕಬಯಸುವ ಶ್ರೇಷ್ಠ ಮಂದಿಗಳಿಗೆ ಈ ದುಷ್ಟ ಸಮುದಾಯದಿಂದ ಬದುಕು ಎನ್ನುವುದೇ ಮಹಾ ಪ್ರಯಾಸ.

ವೀರರಮಣಿಯರಿಂದಲಾಗದ |
ಕಾರಿಯಗಳಿರುತಿಹನೆ ಲೋಕದೊ |
ಳಾರು ವರ್ಣಿಸಲಾಪರಾ ಹದಿಬದೆಯ ಮಹಿಮೆಯನು ||
ಚಾರು ಧರ್ಮವ ಮೀರದಿಹ ನರ |
ನಾರಿಯರಿಗೆಡರಿಹುದೆ ಧರೆಯೊಳು |
ಸಾರಸುಖವನು ಭವಿಪರಿಹಪರವೆರಡ ರಲಿನಿರತಾ || ೧೨ ||

ವೀರ ಮಹಿಳೆಯರಿಂದ ಯಾವ ಕಾರ್ಯವನ್ನು ಮಾಡಲು ಸಾಧ್ಯ ಪತಿ ವ್ರತೆಯ ಧರ್ಮದ ಕುರಿತು ಹೇಳುತ್ತಾ ಅಂತಹ ಸ್ತ್ರೀಯು ಎದುರಿಸುವ ಕಷ್ಟಗಳನ್ನು ಪರಿಹರಿಸು ಎಂದಿದ್ದಾರೆ .ಪಾತಿವ್ರತ್ಯ ಎನ್ನುವುದನ್ನು ಕವಿಯು ವಿಸ್ತಾರವಾಗಿ ವರ್ಣಿಸಿದ್ದಾರ "ಅಹಲ್ಯ, ದ್ರೌಪದಿ, ಸೀತಾ, ತಾಥಾ, ಮಂಡೋದರಿ ಪಂಚಕನ್ಯಾ ಸ್ಮರೀ ನಿತ್ಯಂ ಸಕಲ ಪಾತಕ ನಾಶನಂ " ಪೂರ್ವ ಜನ್ಮದ ಕರ್ಮಕನುಸಾರವಾದ ಯಾವ ದುರ್ಗತಿಯೆ ಇರಲಿ ತಿಳಿದೋ ತಿಳಿಯದೆಯೋ ಗೈದ ಯಾವ ಕರ್ಮಗಳೇ ಇರಲಿ ಈ ಪಂಚ ಮಹಾ ಪತಿವ್ರತೆಯರನ್ನು ಸ್ಮರಿಸುವ ಮೂಲಕ ಪರಿಮಾರ್ಜನೆಯಾಗುತ್ತದೆ ಎಂಬುವುದು ಸಾರ್ವಕಾಲಿಕ ಸತ್ಯವೇ ಹೌದು ಇದನ್ನೇ ಪ್ರತಿಪಾದಿಸಿದ ಕವಯತ್ರಿಯು ವೀರರಮಣಿ ಎಂದರೆ ಪತಿವ್ರತಾ ಧರ್ಮವನ್ನು ತಮ್ಮ ನಿಜಧರ್ಮವೆಂದೇ ಭಾವಿಸಿ ಆಚರಿಸುವ ಮೂಲಕ ಪಾವನರಾದ ಸ್ತ್ರೀ ರತ್ನಗಳು ಈ ಪ್ರಪಂಚದಲ್ಲಿ ಎಂತಹ ಅದ್ಭುತ ಸಾಧನೆಗಳನ್ನು ಮಾಡುವಲ್ಲಿ ಯಶಸ್ವಿಗಳಾಗಿದ್ದಾರೆ ಎನ್ನುವುದನ್ನು ಸೂಕ್ಷ್ಮವಾಗಿ ವಿವರಿಸಿದ್ದಾರೆ. ಅಲ್ಲದೆ ಪುರುಷನಿಗೆ ಪುರುಷ ಧರ್ಮ, ಸ್ತ್ರೀಗೆ ಸ್ತ್ರೀ ಧರ್ಮ, ಪುತ್ರನಿಗೆ ಪುತ್ರ ಧರ್ಮ, ಪಿತೃನಿಗೆ ಪಿತೃ ಧರ್ಮ ಹೀಗೆ ಇವುಗಳು ಒಟ್ಟಾಗಿ ನಿಜ ಧರ್ಮ ಎಣಿಸಿಕೊಳುತ್ತದೆ. ಅಂತಹ ಶ್ರೇಷ್ಠ ಧರ್ಮವನ್ನು ಆಚರಿಸುವ ನಿತ್ಯ ಸೌಖ್ಯವನ್ನೆ ಅನುಭವಿಸಿದ ಸದ್ಧರ್ಮಿಗಳ ಉದಾಹರಣೆ ಎಷ್ಟೋ ಇವೆ. ಹಾಗಾಗಿ ಸದ್ಧರ್ಮಿಗಳ ಉದಾಹರಣೆ ಎಷ್ಟೋ ಇವೆ. ಹಾಗಾಗಿ ಸಧರ್ಮಿಗಳು ಇಹದಲ್ಲೂ, ಪರದಲ್ಲೂ ಸೌಖ್ಯವನ್ನೇ ಅನುಭವಿಸುತ್ತಾರೆ ಅಲ್ಲದೆ ತಮ್ಮ ವಾಂಛಿತವನ್ನೆ ಪಡೆಯುತ್ತಾರೆ ಎನ್ನುವುದು ಈ ಪದ್ಯದ ಆಶಯ.

ಚಿಕ್ಕವಳು ಕೈಗೊಂಡ ವ್ರತವನು |
ಅಕ್ಕರದಿ ಪಾಲಿಸುತ ಯೌವನ |
ಸೊಕ್ಕು ಬರಲದ ಬಿಡುವುದೇತರ ನೀತಿಲೋಕದಿ ||
ಬೆಕ್ಕುಗಳಿಗತಿಕೋಡು ಬಂದರು |
ಸಕ್ಕರೆಯು ಕಹಿಯಾದರಾ ನುಡಿ |
ತಕ್ಕುದಲ್ಲದ ನೊರೆಯುದಿರು ಸಾಕೆಂದಳಿಂದು ಮುಖೀ || ೨೨ ||

ಧೃಡ ನಿರ್ಧಾರವನ್ನು ಯಾವ ಕಾಲದಲ್ಲೂ ಶಿಥಿಲಗೊಳಿಸದೆ ನಡೆದಲ್ಲಿ ಯಶಸ್ಸು ಪ್ರಾಪ್ತಿಸುತ್ತದೆ ಎಂಬ ಅಂಶವನ್ನು ಅನಂತಮತಿಯ ಚರಿತೆಯಲ್ಲಿ ಪ್ರಸ್ತಾವಿಸಿದ ಕವಯತ್ರಿಯು, ಈ ನಿಲುಮೆಯನ್ನು ತಳೆಯಲು ಎಷ್ಟೆಷ್ಟು ಸಂಕಷ್ಟಗಳು, ಬೆದರಿಕೆಗಳನು ಕಾರಾಗೃಹವಾಸವೆಂಬ ದುಸ್ಥಿತಿಯು ಒದಗಿ ಬಂದರೂ ತನ್ನ ಅಚಲ ನಿರ್ಧಾರವನ್ನು ಸಡಿಲಿಸದೆ ಗಾಂಧೀಜಿಯವರ ಆದರ್ಶ ಇದರಲ್ಲಿ ಎದ್ದು ಕಾಣುತ್ತದೆ. ಮುಗ್ಧತೆ ಎಳವೆಯಲ್ಲಿ ಆಟವಾಡುತ್ತಿದ್ದಾಗ ಮುಗ್ಧ ಸ್ವಭಾವೆಯಾದ ಅನಂತಮತಿಯು ಕೈಗೊಂಡ ವ್ರತವನ್ನು ತನ್ನ ಬದುಕು ಪಕ್ವವಾದ ಕಾಲದಲ್ಲೂ ಬಿಡದೆ ತನ್ನ ದೃಢತೆಯನ್ನು ಹೇಗೆ ಮೆರೆದಳು ಎಂಬುದು ಇಲ್ಲಿ ತಿಳಿದು ಬರುತ್ತದೆ. ಗಂಧರ್ವನಿಂದ ಅಪಹೃತಳಾದ ಸಂದರ್ಭವಿರಬಹುದು, ಕಾಡಿನ ಬೇಡನ ಮೃಗೀಯ ವರ್ತನೆಯನ್ನು ಎದುರಿಸಿದಾಗಲೂ, ಅರಸನ ಪರಿಪರಿಯ ಕೇಳಿಕೆಯ ಕಾಲದಲ್ಲೂ, ವೇಶ್ಯೆಯ ಕೆಟ್ಟ ನುಡಿಗಳನ್ನು ನುಡಿದ ಸಂದರ್ಭದಲ್ಲೂ ಬಿಟ್ಟು ಕೊಡದೆ ತನ್ನ ಅಚಲ ನಿರ್ಧಾರವನ್ನು ತನ್ನ ಸಂಬಂಧಿಯನ್ನೇ ಮದುವೆಯಾಗಲು ಪ್ರೇರೇಪಿಸಿದ ತಂದೆ ಹಾಗೂ ತಾಯಿಯ ಒತ್ತಾಯಗಳಿಗೆ ಮಣಿಯದೆ ಅಂದಿನ ತನ್ನ ನಿಲುಮೆಯನ್ನು ಏರು ಯೌವ್ವನದ ಹೊತ್ತಿನಲ್ಲೂ ಕಾಪಾಡಿಕೊಂಡು ಬಂದಳು ಎಂಬುವುದಕ್ಕೆ ಯೋಗ್ಯ ಉದಾಹರಣೆಯನ್ನು ಬೋಧನಾ ಪೂರ್ವಕವಾಗಿ ನಿರೂಪಿಸಿದ್ದಾರೆ. ಪ್ರಕೃತಿ ವಿರೋಧವಾದ ಮೂಡಿಬಂದರೂ, ಸಿಹಿಯ ಗುಣವನ್ನು ಹೊಂದಿದ ಸಕ್ಕರೆ ಕಹಿಯಾಗಿ ಪರಿಣಮಿಸಿದರೂ ಜೀವನದಲ್ಲಿ ಎಂತಹ ಸಂಕಷ್ಟು ಪ್ರಲೋಭನೆಗಳು ಅರಸಿ ಬಂದರೂ ನನ್ನ ನಿರ್ಧಾರವೆಂಬ ಶೃಂಖಲೆಯು ಶಿಥಿಲಗೊಳ್ಳದು ಎಂದು ತನ್ನ ಬಂಧು - ಮಿತ್ರರ, ತಂದೆ - ತಾಯಿಯ ಮಾತನ್ನು ನವಿರಾಗಿ ಅಲ್ಲಗಳೆದಿದ್ದಾಳೆ.

ತಾನು ಕೈಗೊಂಡ ವ್ರತವನ್ನು ಯಾವ ಕಾರಣಕ್ಕೂ ಬಿಡುದಿಲ್ಲ. ಎಂತಹ ಪರಿಸ್ಥಿತಿಯಲ್ಲೂ ಕೈ ಬಡಲಾರೆ ಎನ್ನುತ್ತಾ ಬೆಕ್ಕುಗಳಿಗೆ ಕೋಡು ಬರಬಹುದು, ಸಕ್ಕರೆಯು ತನ್ನ ಸಹಜ ಸಿಹಿಯನ್ನು ಕಳೆದುಕೊಳ್ಳಬಹುದು ಆದರೆ ತಾನು ಕೈಗೊಂಡ ವ್ರತವನ್ನು ಎಂದಿಗೂ ಬಿಡುವುದಿಲ್ಲ ಎಂದಿದ್ದಾರೆ ಈ ಕಾವ್ಯದಲ್ಲಿ.

ಸೌಂದರ್ಯ ಎನ್ನುವುದು ಎಷ್ಟು ಮಾರಕ ಅದನ್ನು ಸಚ್ಚರಿತ್ರೆಯಿಂದ ಗೆದ್ದ ರೀತಿಯನ್ನು ಅನಂತಮತಿ ಎಂಬ ಪಾತ್ರವನ್ನು ಪ್ರತಿನಿಧಿಸಿ ಜನರಿಗೆ ಪ್ರಾಪಂಚಿಕ ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ಸ್ಥಿತ ಪ್ರಜ್ಞತೆಯುಳ್ಳವರಾಗಬೇಕು, ಪತಿವ್ರತಾ ಧರ್ಮವನ್ನು ತಿಳಿದವರಾಗಬೇಕು ಎಂದು ತಮ್ಮ ಕಾವ್ಯದಲ್ಲಿ ಹೇಳಿದ್ದಾರೆ ಮತಿಹೀನರಿಗೆ ಇದು ಹಿತವರವೆಂದು ಬಹಳ ಸ್ಪಷ್ಟವಾಗಿ ಜನ ಸಾಮಾನ್ಯರಿಗೆ ವಿವರಿಸಿದ್ದಾರೆ.

ಮತಿವಿಹೀನರಿಗಿದುವೆ ಹಿತವರ |
ಮತಿಗಳಿಗೆ ಸಚ್ಚರಿತ ಶ್ರೀಜಿನ |
ಪತಿಯ ಪಾದಸರೋರುಹಕ್ಕೆ ನತಭ್ರಮರಿಸಮನೆನಿತಾ ||
ಸತಿಯು ರಚಿಸಿದಳೀ ಕೃತಿಯು ಕ್ಷಿತಿ |
ಗತಿಶಯದಿ ಮೆರೆದಿರಲಿ ಲಕ್ಷ್ಮಿ ||
ಪತಿಯ ವದನದೊಳುದಿತವೆರನೆಯಂಗನಿ ಕಾಂಕ್ಷೆ || ೩೨ ||

ತಾನು ರಚಿಸಿದ ಕೃತಿಯ ಪ್ರತಿ ಸಂಧಿಗಳಲ್ಲು ಸಮಾಜದ ಪಾರದರ್ಶಕತೆಯ ಬಗ್ಗೆ ತನ್ನಮನೋಧರ್ಮ ಏನು ಎನ್ನುವುದನ್ನು ಹಾರೈಕೆಯ ಮೂಲಕ ವ್ಯಕ್ತಪಡಿಸಿದ್ದಾರೆ. ವಿಚಾರಶೂನ್ಯರಾಗಿ ಅಜ್ಞಾನವೆಂಬ ಅಂಧಕಾರದಲ್ಲಿ

ತೊಳಲಾಡುವವರಿಗೆ ಸುಜ್ಞಾನದ ದೀವಿಗೆಯಾಗಿ ಮಾರ್ಗದೀಪಿಕೆಯೇ ಈ ಕೃತಿ ಎಂದ ಕವಯತ್ರಿಯು ವಿಚಾರವಂತರಿಗೆ ತಮ್ಮ ಜ್ಞಾನಾರ್ಜನೆಯನ್ನು ಹೆಚ್ಚಿಸಿಕೊಂಡು ಜ್ಞಾನ ಸಂಪತ್ತನ್ನು ಗಳಿಸುವಲ್ಲಿ ಈ ಕೃತಿಯು ಒಂದು ಸಚ್ಚರಿತೆ ಎಂದಿದ್ದಾರೆ.

**5.1.3 - ಲಕ್ಷೀಬಾಯಿ :-** ಅನಂತಮತಿ ಚರಿತೆಯ ನಂತರ ಮೂಡಿ ಬಂದ ಕಿರು ಕಾವ್ಯದ ಸಾರ ಮಹತ್ವದ್ದು. ಲಕ್ಷೀಬಾಯಿ ಒಬ್ಬ ವೇಶ್ಯೆಯ ಮಗಳು ಆದರೆ ಆಗರ್ಭ ಶ್ರೀಮಂತಳಾದ ತಾನು ಮಾಡುವ ವೃತ್ತಿಯನ್ನು ಧರ್ಮದಿಂದ ನಿರ್ವಹಿಸುತ್ತಿದ್ದಳು. ಬರುವ ಜನರನ್ನು ನಿರಾಶ್ರಿತಗೊಳಿಸುತ್ತಿರಲಿಲ್ಲ ಈ ಪದ್ಯದ ಕಥೆಯಲ್ಲಿ ಓರ್ವ ವಿಪ್ರನ ಉಲ್ಲೇಖವಿದೆ. ಕುಷ್ಟ ರೋಗಿಯಾದ ಈತನ ಸ್ಥಿತಿ ಬಹಳ ಚಿಂತಾಜನಕವಾಗಿರುತ್ತದೆ ಆದರೆ ಪತಿವ್ರತಾ ಧರ್ಮವನ್ನು ಅರಿತ ಸಹಧರ್ಮಿಣಿ ಇದ್ದಾಳೆ. ಹೀನಾಯವಾದ ಸ್ತಿತಿಯಲ್ಲಿದ್ದರು ಲಕ್ಷೀಬಾಯಿ ಎಂಬ ವೇಶ್ಯೆಯೊಂದಿಗೆ ಅಂಗಸುಖವನ್ನು ಬಯಸುತ್ತಾನೆ. ಸ್ವಲ್ಪವೂ ಹೇಸದೆ ಪತಿಯ ಸೇವೆಯನ್ನು ನಿಷ್ಠೆಯಿಂದ ಮಾಡುವ ಆತನ ಅರ್ಧಾಂಗಿ ಲಕ್ಷೀಬಾಯಿಯನ್ನು ಬಯಸುತ್ತಿರುವ ಪತಿಯ ಆಸೆಯನ್ನು ನೆರವೇರಿಸುವ ಹಟ ತೊಡುತ್ತಾಳೆ, ಜಯಿಸುತ್ತಾಳೆ. ಆದರೆ ವೃತ್ತಿಯಲ್ಲಿ ವೇಶ್ಯೆಯಾದರೂ ವಿವೇಕ ಸಂಪನ್ನಳಾದ ಲಕ್ಷೀಬಾಯಿಯು ವಿಪ್ರ ತನ್ನ ಮನಸ್ಸನ್ನು ಮತ್ತೆ ಸಂಸಾರದತ್ತ ತಿರುಗಿಸುವಂತಹ ನೀತಿ ಬೋಧಕ ಕತೆ ಇದಾಗಿದೆ. ಈ ಕೃತಿಯನ್ನು ಚತುಷ್ಪದಿಯಲ್ಲಿ ರಚಿಸಲಾಗಿದೆ. ಈ ಪದ್ಯದ ಭಾಷಾ ಶೈಲಿ ಗಮನಾರ್ಹವಾಗಿದೆ. ಇದರ ಒಂದು ಪದ್ಯವು ಈ ರೀತಿಯಿದೆ.

ಎಳಲತೆಯ ಮಿಗುವ ಕೋಮಲತೆವೆತ್ತಿಹ ತನುವ |
ತಳಿರ ಮೆದುವರುಣ ಕರಚರಣಗಳ ಚೆಲುವೆ ||
ಅಳಿಗುರುಳು ಕಾಳಾಹಿವೇಣಿ ಕಾಮನ ಕೈಯ |
ಗಿಳಿಯೋಲಾ ರಾಜಿಸುವಳಾ ವಾರರಮಣಿ || ೧೫ ||

ವೇಶ್ಯೆ ಲಕ್ಷೀಬಾಯಿಯ ಸೌಂದರ್ಯವನ್ನು ವಿವರಿಸುವ ಪದ್ಯ ಈ ಕೃತಿಯನ್ನು ಓದಿ ಮಂ | ಗೋವಿಂದ ಪೈಗಳು ಕಾಳಿದಾಸನನ್ನು ನೆನೆಯುತ್ತಾ ಇವರನ್ನು 'ಹಸ್ತ ಪ್ರಾಪ್ತಸ್ತಬಕ ನಮಿತೋ ಬಾಲಮಂದಾರ ವೃಕ್ಷ'. ( ಹೂ ಗುಚ್ಚಗಳ ಭಾರದಿಂದ ಭಾಗಿರುವ ಎಳೆಯದಾದ ಮಂದಾರ ವೃಕ್ಷ ಎಂಬ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.)

ಸಪ್ತ ಕ್ಷೇತ್ರಗಳಲ್ಲಿ ಒಂದಾದ ಕಾಶೀಕ್ಷೇತ್ರ ಅದು ವಿಶ್ವನಾಥನ ವಾಸಸ್ಥಾನ ವಿಷಕಂಠನಾದ ತಾನು ಭಕ್ತಾದಿಗಳ ಪಾಲಿಗೆ ಅಮೃತೋಪಮವಾದ ಅನುಗ್ರಹ ಪ್ರಧಾನ ಮಾಡುವವ. ಪಾಪಿಗಳ ಪಾಪನಾಶವನ್ನು ಮಾಡಿ ಪವಿತ್ರಾತ್ಮರನ್ನಾಗಿಸುವ ಗಂಗೆಯ ದಡದಲ್ಲಿ ವಿಜೃಂಭಿಸುವ ಕಾಶೀನಾಥನ ದಿವ್ಯ ಸ್ಥಾನವು ಭಕ್ತರ ಸಂದೋಹಗಳಿಂದ ಸದಾ ತುಂಬಿ ತುಳುಕುತ್ತಿರುವುದು ಯಾವುದೇ ಜನ್ಮದಲ್ಲಿ ಗೈದ ಪಾಪಕರ್ಮದ ಫಲವೋ ಎಂಬಂತೆ ಅಂಧರಾಗಿಯೇ, ಕಿವುಡರಾಗಿಯೋ, ಹೆಳವರಾಗಿಯೋ, ಅಥವಾ ಬುದ್ಧಿ ಶೂನ್ಯರಾಗಿಯೋ ಹುಟ್ಟಿಕೊಂಡ ಮನುಷ್ಯರು ಕಾಶೀ ವಿಶ್ವನಾಥನ ಕೃಪೆಯಿಂದಲೋ ಪಾಪನಾಶಿನಿಯ ಸಲಿಲ ಸೇಚನದಿಂದ ಪಾವನರಾಗುವ ನಂಬುಗೆಯಿಂದಲೇ ಅಲ್ಲಿ ನೆಲೆಸಿರುವರು ಅಲ್ಲದೇ ಉದರ ನಿಮಿತ್ತವಾಗಿ ಕಂಡ ಕಂಡವರಲ್ಲಿ ಯಾಚಿಸುತ್ತಾ ತಮ್ಮ ಜೀವನದ ಕೊನೆಯನ್ನೂ

ಎದುರುನೋಡುತ್ತಿರುವರು ಇಂತಹ ಪಾಪಿಗಳೂ ಪುಣ್ಯವಂತರೂ ತುಂಬಿರುವ ಆ ಮಹಾ ಸಾನಿಧ್ಯದಲ್ಲಿ ಯಾವ ರೀತಿ ಗಂಗೆಯಿಂದ ಮೇಲೆದ್ದು ಶಿವ ದೇವಾಲಯವು ಶೋಭಿಸುವುದೋ ಅಂತೆಯೇ ಹೀನ ವೃತ್ತಿಯಾದ ವೇಶ್ಯಾ ಕುಲದಲ್ಲಿ, ಗುಣಸಂಪನ್ನೆಯೂ ವೃತ್ತಿಧರ್ಮ ಪರಾಯಣೆಯೂ, ಗಣಿಕಾಕುಲ ದೀಪಕೆಯೂ ಆದ ಲಕ್ಷ್ಮೀಬಾಯಿ ಎಂಬವಳು ಜನಿಸುತ್ತಾಳೆ.

ಇನಿತು ಗಣಿಕಾಕುಲದ ನಿಜವೃತ್ತಿಯನು ಗೈದು |
ದಿನಗಳೆವಳಾದೊಡಾ ನಾರಿ ಹೃದಯದೊಳು ||
ಗುಣ ಸಮೂಹವು ತುಂಬಿ ತುಳುಕುತಿಹುದೆಂದೆನಲು |
ಘನತೋಷದಾಯಕಮದೆತ್ತಿ ಧರಣಿಯೊಳು || ೨೫ ||

ಪರಮ ಪುಣ್ಯ ಭೂಮಿಯಾದ ಕಾಶೀ ಕ್ಷೇತ್ರದಲ್ಲಿ ಹುಟ್ಟುವುದೂ ಪೂರ್ವ ಜನ್ಮದ ಪುಣ್ಯ ವಿಶೇಷ ಅಂತಹುದರಲ್ಲಿ ಘೋರ ಪಾಪಕರ್ಮವಾದ ವೇಶ್ಯೆಯ ಮನೆತನದಲ್ಲಿ ಆ ಮನೆತನಕ್ಕೆ ಪೂರಕವಾದ ವೃತ್ತಿಯನ್ನು ಅನುಸರಿಸಿಯೂ ತನ್ನ ಸದ್ಗುಣಗಳಿಂದ ತನ್ನನ್ನು ಬಯಸಿಬಂದವರಿಗೆ ಎಳ್ಳನಿತು ವಂಚನೆಯಾಗದಂತೆ ಅವರ ದಾಹವನ್ನು ತೀರುಸುವುದರೊಂದಿಗೆ ಅವರಲ್ಲಿ ಮಾನಸಿಕವಾಗಿ ಪರಿವರ್ತನೆಯನ್ನು ಉಂಟುಮಾಡುವ ಮನೋಭಾವವನ್ನು ಹೊಂದಿದವಳೇ ಈ ಲಕ್ಷ್ಮೀಬಾಯಿ ಬಾಹ್ಯ ಸೌಂದರ್ಯ ಹೇಗೆ ಅಪರಿಮಿತವಾಗಿತ್ತೋ ಅದೇ ರೀತಿ ಸದ್ಗುಣಗಳೆಂಬ ಮಹಾ ಸಂಪತ್ತನ್ನು ಹೊಂದಿದ ಸಿರಿವಂತೆ ಈಕೆ. ಕೆಸರಿನಲ್ಲಿಹುಟ್ಟಿದ ಪುಷ್ಪವಾದರೂ ತನ್ನ ಅಂದದಿಂದ, ಪರಿಮಳದಿಂದ, ಯೋಗ್ಯತೆಯಿಂದ ಪರಮಾತ್ಮನ ಸಿರಿ ಮುಡಿಗೆ ಅರ್ಪಿತವಾಗುವಂತೆ ವೃತ್ತಿಯಲ್ಲಿ ಗಣಿಕೆಯಾಗಿದ್ದರೂ ತನ್ನ ಸದ್ಗುಣಗಳಿಂದ ನಿರ್ವಂಚನಾ ಪೂರ್ವಕವಾದ ವೃತ್ತಿಯ ಆಚರಣೆಯಿಂದ ತಾನು ಗೈಯ್ಯುವಂತಹ ಈ ಗೈಮೆಯು ಭಗವಂತನ ಪ್ರೀತ್ಯಾರ್ಥ ಎಂದೇ ಭಾವಿಸುವ ಸಮೃದ್ಧ ಮನೋಭಾವೆಯೂ ಹೌದು.

ಲಕ್ಷ್ಮೀಬಾಯಿಯ ಪಾತ್ರ ಚಿತ್ರಣದೊಂದಿಗೆ ಕವಯತ್ರಿಯೂ ಬದುಕು ಎಂದರೇನು ? ಹೇಗೆ ಬದುಕ ಬೇಕು ? ಎಂಬವುದನ್ನು ಮನೋಜ್ಞವಾಗಿ ತಿಳಿಸಿದ್ದಾರೆ. ಸಸಿಯೊಂದು ಬೆಳೆದು ಹೆಮ್ಮರವಾಗಿ ಆಶ್ರಯಿಸಿ ಬಂದವರಿಗೆ ಆಶ್ರಯವನ್ನು, ಹಸಿದು ಬಂದವರಿಗೆ ಹಣ್ಣನ್ನು , ನೆರಳನ್ನೂ ನೀಡಿ ಸಂತೃಪ್ತ ಪಡಿಸುವಂತೆ ಜೀವಿಯ ಜೀವನವು ಇನ್ನೊಬ್ಬರಿಗೆ ಆದರ್ಶ ಪ್ರಾಯವು, ಅನುಗ್ರಹಕಾರವು ಆಗಬೇಕೆಂಬುದು ಕವಿಯ ಹೃದಯ. ಆದುದರಿಂದಲೇ ಕಾಶೀ ಎಂಬಂತಹ ಪುಣ್ಯ ಕ್ಷೇತ್ರದಲ್ಲಿ ವೇಶ್ಯಾವೃತ್ತಿಯೆಂಬ ಪಾಪಕರ್ಮದಲ್ಲೂ ತನ್ನ ವೃತ್ತಿನಿಷ್ಠೆಯಿಂದ ಹೇಗೆ ಬದುಕಿದಳು ಎಂಬುವುದನ್ನು ನಿರೂಪಿಸುವ ಮೂಲಕ ದಿವ್ಯಬೋಧನೆಯನ್ನು ಕವಯತ್ರಿ ನೀಡಿದ್ದಾರೆ.

ಮತಿವಂತೆಯುದಯಕಾಲದಿ ಗಂಗೆಯಲಿ ಮಿಂದು |
ಸತತ ದೇಗುಲ ಕೈದಿ ಭಕ್ತಿ ಭಾವದೊಳು ||
ಅತಿಹೇಯವಾದ ಗಣಿಕಾ ಜನ್ಮವ ಬೇಗ |
ಹತಗೆಡಿಸಿ ಸಲಹೆಂದು ಶಿವನ ಬೇಡುವಳು || ೨೬ ||

ಸತ್ಕುಲ ಪ್ರಸೂತರೂ ನಡೆಸದಿದ್ದ ಸದಾಚಾರವನ್ನು ವೇಶ್ಯೆಯಾದರೂ ಲಕ್ಷ್ಮೀ ಬಾಯಿ ನಡೆಸುತ್ತಿದ್ದಳು. ಜಗತ್ತನ್ನೇ ಬೆಳಗುವ ಸೂರ್ಯ ದೇವನು ತನ್ನ ಜೀವನವನ್ನು ಬೆಳಗಲಿ ಎಂಬ ಆಶಯವನ್ನಾಂತ ಈಕೆ ಸೂರ್ಯೋದಯಕ್ಕೂ ಮೊದಲು ಎದ್ದು ಪಾಪನಾಶಿನಿಯಾದ ಗಂಗಾಭವಾನಿಯಲ್ಲಿ ಮಿಂದು, ಶುಚಿರ್ಭೂತಳಾಗಿ ಶಿವ ಸಾನಿಧ್ಯವನ್ನು ಸೇರಿ ಈಶ್ವರನನ್ನು ಆರಾಧಿಸುವಳು. ವಂಶ ಪದ್ಧತಿಯಂತೆ ಮಾಡಲೇ ತಕ್ಕುದಾದ ಅತೀ ಹೇಯವಾದ ಈ ವೇಶ್ಯಾ ವೃತ್ತಿಯನ್ನು ಆದಷ್ಟು ಬೇಗ ನಾಶಗೊಳಿಸು ಎಂಬ ಹಾಗೆ ಸೆರಗೊಡ್ಡಿ ಪ್ರಾರ್ಥಿಸುವಾಗ ಅವಳಲ್ಲಿರುವ ಭಕ್ತಿಯ ಪರಾಕಾಷ್ಟತೆ ಎದ್ದು ಕಾಣುತ್ತದೆ. ಅಲ್ಲಿಂದ ಹಿಂದಿರುಗಿ ಬರುವ ದಾರಿಯಲ್ಲಿ ಯಾಚಕರರಿಗೆ ಸಾಂತ್ವನದ ನುಡಿಗಳನ್ನು ಆಡಿ ಅವರಿಗೆ ಕೈತುಂಬ ದಾನ ಮಾಡುವಳು, ಸಾಧು ಸಂತರು, ಸನ್ಯಾಸಿಗಳನ್ನು ಗೌರವದಿಂದ ಆಧರಿಸಿ ಅವರಿಗೆ ಯೋಗ್ಯ ಕಾಣಿಕೆಗಳನ್ನಿತ್ತು ಅವರಿಂದ ಆಶೀರ್ವಾದವನ್ನು ಪಡೆಯುವಳು. ಜೀವನದಲ್ಲಿ ನೆಮ್ಮದಿಯನ್ನು ಕಾಣದೆ ನಿರ್ವಿಣ್ಣರಾಗಿ ತರಹರಿಸುತ್ತಿರುವವರಿಗೆ ಧೈರ್ಯೋಕ್ತಿಯನ್ನು ಅರುಹಿ ಅವರು ಏನನ್ನು ಅಪೇಕ್ಷಿಸುತ್ತಾರೊ ಅದನ್ನು ನೀಡುವ ಮೂಲಕ ಅವರಲ್ಲಿ ಧೈರ್ಯವನ್ನು ನೀಡುವಳು. ದೀನರಲ್ಲಿ ದಯೆಯನ್ನು ಸ್ನೇಹಿತರಲ್ಲಿ ಸ್ನೇಹವನ್ನು, ದೇವರಲ್ಲಿ ಭಕ್ತಿಯನ್ನು, ಗುರುಹಿರಿಯರಲ್ಲಿ ವಿನಮ್ರತೆಯನ್ನು ಪ್ರಕಟಿಸುತ ಈ ಲಕ್ಷ್ಮೀ ಬಾಯಿಯ ಬದುಕಿನ ಗಾಥೆಯೇ ಒಂದು ಭೋದಪ್ರದವಾದದ್ದು

ತೆರಳಿ ನಿಜಮಂದಿರಕ್ಕೆ ಬರುವ ಬಡಬಗ್ಗರಿಗೆ |
ಕುರುಡ ಕುಂಟರಿಗಿತ್ತು ದಾನ ಧರ್ಮವನು ||
ಕರೆದು ಸಾಧುಗಳನಾದರ ಮೊಳುಪಚರಿಸುತಲಿ |
ನೆರೆದುಃಖಿಗಳನು ಸಂತವಿಪಳನವರದ
ಆಡುವಳು ಕರುಣಾರ್ದ್ರವಾಣಿಯಿಂದೊಮ್ಮೊಮ್ಮೆ |
ಕೂಡೆ ಮರುಕವಗೊಂಬಳಿರದೆ ಮನದೊಳಗೆ ||
ಬೇಡಿದುದನೊಲಿದಿತ್ತು ಗತಿಹೀನರನು ಪೊರೆದು |
ನೋಡೆ ಮಹಾದಾನಂದಮವಳ ಕೃತಿ ಧರೆಗೆ || ೨೮ ||

ಲೌಕಿಕ ದೃಷ್ಟಿಕೋನವನ್ನಿರಿಸಿ ಸಮಾಜದಲ್ಲಿ ಸುವ್ಯವಸ್ಥೆಯನ್ನು ರೂಪಿಸುವ ನಿಟ್ಟಿನಲ್ಲಿ ಲಕ್ಷ್ಮೀ ಬಾಯಿಯೆಂಬ ವೇಶ್ಯಾಪಾತ್ರದ ಪ್ರಾತಿನಿಧಿತ್ವದಲ್ಲಿ ಸಮೃದ್ಧವಾದ ವಿವರಣೆಯನ್ನು ಕವಯತ್ರಿ ರಾಧಮ್ಮ ನೀಡಿದ್ದಾರೆ. ಯಾವ ರೀತಿ ವಿಷವನ್ನುಂಡು ಭಕ್ತಾದಿಗಳ ಪಾಲಿಗೆ ಅನುಗ್ರಹವನ್ನು ಈಶ್ವರ ಮಾಡುತ್ತಾನೋ, ಯಾವ ರೀತಿ ಪಾಪಕರ್ಮಗಳನ್ನು ಮಾಡಿ ತನ್ನಲ್ಲಿ ಸ್ನಾನಗೈದ ಪಾಪಿಗಳ ಪಾಪವನ್ನು ತನ್ನಲ್ಲಿ ಇರಿಸಿಕೊಂಡು ಅವರ ಪಾಪನಾಶವನ್ನು ಗಂಗೆ ಹೇಗೆ ಗೈವಳೋ ಅದೇ ರೀತಿ ತನ್ನನ್ನು ಬಯಸಿ ಬಂದವರಿಗೆ ಎಳ್ಳಷ್ಟೂ ವಂಚಿಸದೆ ಅವರನ್ನೂ ಸಂತೃಪ್ತಗೊಳಿಸಿ ಕಳುಹಿಸುವಳಲ್ಲದೆ ಅವರ ಮನಸ್ಸಿನಲ್ಲಿ ಸದ್ಭಾವನೆ ಮತ್ತು ಸನ್ನಡತೆಯ ಬೀಜವನ್ನು ಬಿತ್ತುವಳು. ಇದಕ್ಕೆ ಯೋಗ್ಯ ನಿದರ್ಶನ ಈ ಕಾವ್ಯದಲ್ಲಿ ಬರುವ ಕುಷ್ಠರೋಗಿ ವಿಪ್ರನ ಪ್ರಸ್ತಾವ.

ಕವಯತ್ರಿಯು ಲೌಕಿಕ ದೃಷ್ಟಿಕೋನವನ್ನಿರಿಸಿ ಕೃತಿಯನ್ನು ರಚಿಸಿದ್ದರೂ ಆಧ್ಯಾತ್ಮಿಕ ಚಿಂತನೆಯನ್ನು ಧಾರೆಯರೆಯುವುದರ ಮೂಲಕ ಸದ್ಧರ್ಮವನ್ನು ಪ್ರತಿಪಾದಿಸಿದುದು ಗಮನಾರ್ಹ. ಪತಿಪರಾಯಣೆಯಾದ, ಸ್ವರದ್ರೂಪಿಯಾದ ಮಡದಿಯನ್ನು ಹೊಂದಿದ್ದರೂ, ಲಕ್ಷ್ಮೀ ಬಾಯಿಯ ತನುಸುಖವನ್ನು ಬಯಸಿದ ಬ್ರಾಹ್ಮಣನನ್ನು ಯಾವ ರೀತಿ ಆಧರಿಸಿದಳು, ಅದರೊಂದಿಗೆ ಅವನಲ್ಲಿ ಯಾವ ರೀತಿ ಸತ್ಯದ ಸಾಕ್ಷಾತ್ಕಾರವನ್ನುಂಟು ಮಾಡಿದಳು. ಸಹಧರ್ಮಿಣಿಯ ಮಹತ್ವಿಕೆಯನ್ನು ಯಾವ ರೀತಿಯಲ್ಲಿ ತಿಳಿಯ ಪಡಿಸಿದಳು. ಹಾಗು ತನ್ನನ್ನು ಬಯಸಿ ಬಂದ ಆ ಕುಷ್ಠರೋಗಿಯಾದರೂ ನಿರಾಶನಾಗಕೂಡದು ಎಂದು ಯಾವ ರೀತಿ ಆರೈಕೆ ಮಾಡಿದಳು ಇದನ್ನೆಲ್ಲಾ ಗಮನಿಸಿದಾಗ ಆಕೆಯಲ್ಲಿರುವ ಸದ್ಗುಣಗಳು, ಮಾತೃತ್ವವನ್ನು ತುಂಬಿಕೊಂಡ ಹೃದಯ ವೈಶಾಲ್ಯವು ಮತ್ತು ಧರ್ಮದ ಆಚರಣೆಯು ಪ್ರತಿ ಪಾದಿತನಾಗಿ ಕವಿಯ ಹೃದಯದ ಭಾವನೆಯು ಕಣ್ಣಿಗೆ ಕಟ್ಟಿದಂತಾಗುತ್ತದೆ.

ಕವಯತ್ರಿ ಜೈನಮಹಿಳೆ ರಾಧಮ್ಮನವರು ಲಕ್ಷ್ಮೀ ಬಾಯಿ ಬಯಸಿ ಬಂದ ಕುಷ್ಠರೋಗಿ ವಿಪ್ರನಿಗೆ ಸತ್ಯದ ಸಾಕ್ಷಾತ್ಕಾರವನ್ನು ಲಕ್ಷ್ಮೀ ಬಾಯಿ ಮಾಡಿಸಿದ ರೀತಿಯನ್ನು ಮನ ಮುಟ್ಟುವಂತೆ ಈ ರೀತಿ ಪದ್ಯದಲ್ಲಿ ವರ್ಣಿಸಿದ್ದಾರೆ. ವೇಶ್ಯೆಯ ಮನೆಯಲ್ಲಿ ಈ ವಿಪ್ರನನ್ನು ಆರೈಕೆ ಮಾಡುವಾಗ ಉಪಯೋಗಿಸಿದ ಸಕಲ ಸಾಹಿತ್ಯಗಳು ಯಾವ ರೀತಿ ಪೂರಕವಾಗಿದ್ದವು. ಆ ಸನ್ನಿವೇಶವನ್ನು ಯಾವ ರೀತಿ ನಿರೂಪಿಸಿದವು ಎನ್ನುವುದನ್ನು ಕೆಳಗಿನ ಪದ್ಯದಲ್ಲಿ ಸುಂದರವಾಗಿ ಚಿತ್ರಿಸಿದ್ದಾರೆ. ಹೊಳೆಯುವ ಕಲಶವೆರಡರಲ್ಲಿ ನೀರನ್ನು, ಲವಣ ಮಿಶ್ರಿತ ನೀರನ್ನು ಕೊಡುತ್ತ ಬದುಕಿನ ವಾಸ್ತವತೆಯ ಅರಿವನ್ನು ವಿಪ್ರನಿಗೆ ವೇಶ್ಯೆ ಮಾಡುವ ಬಗ್ಗೆ ಬಹಳ ಸುಂದರವಾಗಿ ಮೂಡಿ ಬಂದಿದೆ.

ಮಿರುಗುತಿಹ ಚಿನ್ನದಾ ಹರಿವಾಣದಲಿ ತುಂಬಿ ||
ಉರುತರದ ಭಕ್ಷ್ಯಗಳನಿರಿಸಿ ಮುಂಗಡೆಯೆ ||
ವರ ಸುವರ್ಣದ ದೀಪ ಬೆಳಗಿ ಸಂತೋಷದೊಳು ||
ಪರಿಪರಿ ಫಲಾಹಾರಕೆಡೆಗೈದು ಬಿಳಿಕ || ೬೯ ||

ಹರಳು ಮಾಣಿಕ ಮುತ್ತು ವಜ್ರ ವೈಢೂರ್ಯದೊಳು |
ವಿರಚಿಸಿದ ಹೊನ್ನ ಕಲಶದಿ ಪೂರ್ಣಜಲವು ||
ಪೆರತೊಂದು ಮಣ್ಣ ಭಾಜನದಿ ಸಲಿಲವ ತುಂಬಿ |
ತರುಣಿಮಣಿ ವಿಪ್ರನಿದಿರಿನೊಳಿಡು ಮುದದಿ || ೭೦ ||

ನಲವಿನಿಂದುಲಿದಳೆಲೆ ವಿಪ್ರಕುಲತಿಲಕ ಕೇಳ್ |
ಪೊಳೆವ ಪೊಂಗಲಶದಲಿ ತುಂಬಿಹುದು ಲವಣ ||
ಮಿಳಿತವಹ ಜಲವು ಪೆರತೊಂದು ಮಡಕೆಯೊಳಿಹುದು |
ಸೆಲೆ ಜಾಹ್ನವಿಯ ಪವಿತ್ರಾಂಬುವೆರಡರೊಳು || ೭೧||

ದೇವ ತವಚಿತ್ತಕಾವುದು ಹಿತವೊ ಕೊಂಡದಂ |
ಆವುದೊಲ್ಲದೊ ಅದನು ಬಿಡುವುದೆನಲಾಗ ||
ಆ ವಿಪ್ರನಾಲೋಚಿಸುತ ತನಗೆ ಜಾಹ್ನವಿಯ |
ಪಾವನಾಂಬುವೆ ಲೇಸು ಕೊಳವೆನದರೆನಲು || ೭೪||

ಅಂತಾದೊಡೀಪಲಬರುಂಡುಳಿದ ಉಚ್ಚಿಷ್ಟ |
ವೆಂತು ಸೇವಿಪರಿ ಮನಕೊಗ್ಗುವುದೆ ಬರಿದೆ ||
ಭ್ರಾಂತಿಗೊಂಡ್ಯೆ ತಂದಿರೇಕೆ ? ಶುದ್ಧಾನ್ನವಿರೆ |
ಸಂತೋಷದಿಂದುಂಡು ಸುಖಿಸಲೇನ್ನೊರತೆ ?

ವೇಶ್ಯೆಯಾದ ತನ್ನನ್ನು ಬಯಸಿ ಪತಿವ್ರತಾ ಶಿರೋಮಣಿಯಾದ ತನ್ನ ಸತಿಯನ್ನು ತಿರಸ್ಕರಿಸಿದ ವಿಪ್ರನ ಮೌಢ್ಯವನ್ನು ಲಕ್ಷ್ಮೀಬಾಯಿಯು ನಿವಾರಿಸಿದ ರೀತಿ ಪ್ರಾಪಂಚಿಕರಿಗೆ ಸಲುವಾಗಿ ಕವಯತ್ರಿ ಹಿಡಿದ ಕೈಗನ್ನಡಿಯೇ ಹೌದು ವಿಪ್ರನನ್ನು ಉಪಚರಿಸಿ ಉತ್ತಮಾಸನದಲ್ಲಿ ಕುಳ್ಳಿರಿಸಿದ ಲಕ್ಷ್ಮೀ ಬಾಯಿ ಅವನ ಎದುರಲ್ಲಿ ಹೊಳೆವ ಚಿನ್ನದ ಹರಿವಾಣದಲ್ಲಿ ಬಗೆಬಗೆಯ ಭಕ್ಷ್ಯವನ್ನು, ಭೋಜ್ಯವನ್ನು, ಫಲಗಳನ್ನು ಇರಿಸುತ್ತಾಳೆ. ಸುವರ್ಣ ದೀಪವನ್ನು ಬೆಳಗಿಸಿ ಸಂತೋಷದಲ್ಲಿ ಫಲಹಾರ ಸ್ವೀಕರಿಸುವಂತೆ ವಿನಂತಿಸುತ್ತಾಳೆ. ಅಜ್ಞಾನ ಎನ್ನುವುದು ಜ್ಞಾನದ ಕೊರತೆ, ಕತ್ತಲೆ ಎಂಬುವುದು ಬೆಳಕಿನ ಅಭಾವ, ವಿಪ್ರನಲ್ಲಿ ಜ್ಞಾನದ ಶೂನ್ಯತೆಯನ್ನು ಮನಗಂಡ ಆ ವೇಶ್ಯೆಯು ಸುವರ್ಣ ದೀಪವನ್ನು ಬೆಳಗುವ ಮೂಲಕ ಅವನಲ್ಲಿ ಜ್ಞಾನದ ಬೆಳಕು ಬೆಳಗುವಂತೆ ಮಾಡುತ್ತಾಳೆ. ಹೊಳೆವ ತನ್ನ ನಿಷ್ಕಲ್ಮಶವಾದ ಹೃದಯಕ್ಕೆ ದ್ಯೋತಕವಾಗಿ ಬಂಗಾರದ ಹರಿವಾಣವನ್ನಿರಿಸಿದರೆ ಸತ್ಫಲವನ್ನೂ ಅರ್ಥಾತ್ ಜ್ಞಾನ ಸುಧೆಯನ್ನು ನೀಡುವ ತನ್ನ ಕರ್ತವ್ಯವನ್ನು ಮೆರೆಸುತ್ತಾಳೆ. ಇದು ಕವಯತ್ರಿಯು ಲಕ್ಷ್ಮೀ ಬಾಯಿಯ ಮಾಲಕ ಪ್ರಾಪಂಚಿಕರಿಗೆ ನೀಡಿದ ಸಂದೇಶವೇ ವಾದಂತಿದೆ.

ನವರತ್ನ ಖಚಿತವಾದ ಬಂಗಾರದ ಕಲಶದಲ್ಲಿ ಲವಣಮಿಶ್ರಿತ ಉದಕವನ್ನು, ಮೃತ್ತಿಕೆಯ ಕಲಶದಲ್ಲಿ ಗಂಗೆಯ ಪವಿತ್ರ ಜಲವನ್ನು ವಿಪ್ರನ ಮುಂದಿರಿಸುತ್ತಾಳೆ. ಆಶ್ಚರ್ಯಗೊಂಡ ವಿಪ್ರನು ಈ ಎರಡು ಕಲಶದ ಔಚಿತ್ಯವೇನು ಅದರಲ್ಲಿ ತುಂಬಿರುವುದು ಏನು ಎಂದು ಕೇಳಿದಾಗ ವರ್ಣಿಸಿದ ರೀತಿ, ಮಾರ್ಮಿಕವಾದದ್ದು. ಹೊರಗೆ ಸುಂದರವಾಗಿ ಶೋಭಿಸುವ ನವರತ್ನ ಖಚಿತ ಕಲಶದಲ್ಲಿರುವುದು. ಲವಣೋದಕ, ಮೃತ್ತಿಕೆಯ ಕಲಶದಲ್ಲಿರುವುದು ಗಂಗೋದಕ, ನಿನಗಾವುದು ಬೇಕು ಸ್ವೀಕರಿಸುವುದು ಎಂದಾಗ ವಿಪ್ರನಲ್ಲಿ ಸತ್ಯದ ಸಾಕ್ಷಾತ್ಕಾರವಾಗುತ್ತಾದೆ. ತನ್ನನ್ನೇ ಆಧರಿಸಿ ಆರಾಧಿಸಿ ಅನುಸರಿಸುವ, ಪತಿವ್ರತೆಯಾದ ಸಾಕ್ಷಾತ್ ಗಂಗಾಭವಾನಿ ಸದೃಶ್ಯಳಾದ ತನ್ನ ಸಹಧರ್ಮಿಣಿಯ ಸಹವಾಸವನ್ನು ಉಳಿದು ದೃಗೋಚರಕ್ಕೆ ನಶ್ವರವಾದ ಬಾಹ್ಯ ಸೌಂದರ್ಯವನ್ನು ಹೊಂದಿದ್ದು ತನ್ನೊಳಗೆ ಅತಿಯಾದ ಕಾಲುಶ್ಯವನ್ನು (ವೇಶ್ಯಾ ವೃತ್ತಿ)| ಹೊಂದಿದ ಈಕೆಯನ್ನು ಬಯಸುವ ಮೂಲಕ ನಾನೆಂತ ಅನ್ಯಾಯವನ್ನು ಮಾಡಿದೆ ಎಂದು ಹಪಹಪಿಸುತ್ತಾನೆ.

ಕಾಮಾತುರನಾದ ವಿಪ್ರನಲ್ಲಿ ಈ ಬದಲಾವಣೆಯನ್ನು ಈ ರೀತಿಯ ಸನ್ನಿವೇಶ ನಿರ್ಮಾಣದೊಂದಿಗೆ ನಿರೂಪಿಸಿದ ಕವಯತ್ರಿಯ ಕೌಶಲ್ಯವು ಮೆಚ್ಚುವಂತಹುದು. ವೇಶ್ಯೆಯ ಮೂಲಕ ಕವಯತ್ರಿ ರಾಧಮ್ಮನವರು ವೇಶ್ಯಾ ಸಮುದಾಯಕ್ಕೆ ಎಚ್ಚರಿಕೆಯನ್ನು ನೀಡಿದ್ದಾರೆ. ಕಾಮನನ್ನು ದಹನಮಾಡಿ ಕಾಮಾರಿ ಎಂಬ ಬಿರುದಾಂಕಿತವಾದ ವಿಶ್ವನಾಥ ಐಹಿಕವಾದ ಕಾಮನೆಗಳು ಅಂತ್ಯವಿಲ್ಲದವು ಕಾಮುಕತನವನ್ನು ಪ್ರಚೋದಿಸುವ ಹೇಯ ಜೀವನಕ್ರಮವಾದ ನನ್ನ ಈ ಗಣಿಕಾ ವೃತ್ತಿಯನ್ನು ಆದಷ್ಟು ಬೇಗ ಲಯಗೊಳಿಸಿ ನನಗೆ ಮುಕ್ತಿಯನ್ನು ನೀಡು ಎಂದು ಪ್ರಾರ್ಥಿಸುವಾಗ, ವೇಶ್ಯೆಯೊಬ್ಬಳ ಮನದಾಳದಲ್ಲಿ ಇರಬಹುದಾದ ನೋವು ಏನು ಎನ್ನುವುದನ್ನು ತಿಳಿಸಿದ್ದಾರೆ.

ಅಲ್ಲದೆ ಬಯಸಿ ಬಂದ ಕುಷ್ಠರೋಗಿ ವಿಪ್ರನ ಶರೀರದ ಗಾಯಗಳಿಗೆ ಔಷದೋಪಚಾರ ಮಾಡಿದಂತೆ ಅವನಲ್ಲಿ ಅಂತರ್ಗತವಾಗಿರುವ ಮಹಾ ಕುಷ್ಟವನ್ನು ( ಕಾಮರೋಗ ) ಯಾವ ರೀತಿ ತೊಡೆದು ಹಾಕಿದಳು ಮರಳಿ ಅವನಲ್ಲಿ ಜಾಗೃತಿಯನ್ನು ಮೂಡಿಸಿ, ಒಬ್ಬ ಸದ್ಗುಣಿಗೆ ಪಾವನಾತ್ಮಕವಾದ ಪತಿಯನ್ನು ಪ್ರಧಾನಿಸಿದಳು. ಅದರೊಂದಿಗೆ ಮರಳಿ ಪವಿತ್ರ ದಾಂಪತ್ಯವನ್ನು ಹೇಗೆ ಬೆಳಗಿಸಿದಳು ಎಂಬುದನ್ನು ತರ್ಕಿಸಿದಾಗ ಸಾಮಾನ್ಯವಾಗಿ ವಿತ್ತವೊಂದನ್ನು ಅಪೇಕ್ಷಿಸಿ, ಕಾರ್ಯಚರಿಸುತ್ತಿರುವ ವೇಶ್ಯಾಕುಲಕ್ಕೆ ನೀಡಿದ ಸಂದೇಶವೂ ಹೌದು, ಅಪವಾದವೂ ಹೌದು.

ಮರೆವಾಮಲಕಪುರದೊಳಿರುವಾಕೆಯಾ ಪುರದೋ |
ಳಿರುವ ಸಿರಿಮದನಂತ ಜಿನಪತಿಯ ಚರಣಾಂ ||
ಬುರುಹ ಮಧುಕರಿಜೈನ ಮಹಿಳೆ ಕನ್ನಡದ ಸೋ |
ದರಿಯಂದಿರಿಗೆ ನಿವೇದಿಸಿದಳೀ ಕೃತಿಯೆ || ೭೭ ||

ಲಕ್ಷ್ಮೀ ಬಾಯಿ ಕೃತಿಯಲ್ಲಿ ಕೊನೆಯಲ್ಲಿ ಬಹಳ ಸ್ಪಷ್ಟವಾಗಿ ತಾನು ಈ ಕೃತಿಯನ್ನು ರಚಿಸಿದ್ದು ಯಾರಿಗೆ ಎನ್ನುವುದನ್ನು ಹೇಳಿದ್ದಾರೆ. ಸ್ತ್ರೀಯರಲ್ಲಿ ಎಚ್ಚರಿಕೆಯನ್ನು ಮೂಡಿಸುವ ಸಲುವಾಗಿ, ಸ್ಥಿತಿ ಪ್ರಜ್ಞತೆಯನ್ನು ಬೆಳೆಸಿಕೊಳ್ಳಬೇಕಾಗಿ ಹೇಳಿರುತ್ತಾರೆ.

**5.1.4 - ಸಂಗೀತ ಪೂಜಾ ಸಂಗ್ರಹ** :- "ಶ್ರಾವಕರು ಪ್ರತಿ ದಿನ ಪಾಲಿಸುವ ಆರು ಕ್ರಿಯೆಗಳಲ್ಲಿ ದೇವ ಪೂಜೆಯು ಮೊದಲನೆಯದು. ಅರಹಂತಸಿದ್ಧ ಪರಮಾತ್ಮರ ಪೂಜೆ ಮಾಡುವುದು ಅವರನ್ನು ಪ್ರಸನ್ನಗೊಳಿಸುವುದಕ್ಕಲ್ಲ. ಅವರು ರಾಗದ್ವೇಷರಹಿತ ವೀತರಾಗಿದ್ದಾರೆ. ನಮ್ಮ ಪೂಜೆ ಪ್ರಸಂಸೆಯಿಂದ ಅವರು ಹಿಗ್ಗುವುದಿಲ್ಲ, ಪೂಜಿಸಲಿಲ್ಲವೆಂದು ಕುಗ್ಗುವುದಿಲ್ಲ, ಪೂಜೆಯಿಂದ ನಮ್ಮ ಭಾವ ಶುದ್ಧಿಯಾಗುತ್ತದೆ. ಜನರ ಕಲ್ಯಾಣವಾಗುತ್ತದೆ.

ಗುಣಗಳನ್ನು ಮನನ ಮಾಡುವುದರಿಂದ ನಮ್ಮ ಭಾವವು ಪವಿತ್ರವಾಗುವುದು ದ್ವೇಷಾ ಅಸೂಯೆಗಳು ನಾಶವಾಗಿ ಸ್ನೇಹ ಸೌಹಾರ್ದತೆ ಬೆಳೆದು ಪ್ರೀತಿ ಪ್ರೇಮಗಳು ಹೆಚ್ಚುವುದು, ನಮ್ಮ ಒಳ್ಳೆಯ ಹಾಗೂ ಕೆಟ್ಟದ್ದು ನಮ್ಮ ಭಾವನೆಗಳನ್ನೇ ಹೊಂದಿರುತ್ತದೆ. ಪರಮಾತ್ಮನ ಭಕ್ತಿಯನ್ನು ಮಾಡುವುದರಿಂದ ನಮ್ಮ ಮನಸ್ಸಿಗೆ ಶಾಂತಿ ಉಂಟಾಗುವುದು. ಭಕ್ತಿಯಿಂದ ಕೂಡಿದ ಶಾಂತ ಭಾವದಿಂದ ಪಾಪಗಳು ನಾಶವಾಗಿ ಪರಿಶುದ್ಧರಾಗುತ್ತೆವೆ.

ಜಲ ಚಂದನ ಮತ್ತು ಇತರ ಅಷ್ಟ ದ್ರವ್ಯಗಳಿಂದ ಮಾಡುವ ಪೂಜೆಗೆ ದ್ರವ್ಯ ಪೂಜೆಯೆಂದು, ಗುಣಗಳ ಕುರಿತು ಮಾಡುವುದು ಭಾವಪೂಜೆಯೆಂದು ಹೇಳಲ್ಪಡುವುದು. ಸಂಸಾರದಲ್ಲಿ ನಿರತರಾದ ಗ್ರಹಸ್ಥರು ತಮ್ಮ ಮನಸ್ಸನ್ನು ದೇವಭಕ್ತಿಯಲ್ಲಿ ನಿರತಗೊಳಿಸಲು ಎಂಟು ದ್ರವ್ಯಗಳಿಂದ ಪೂಜಿಸಿ, ಎಂಟು ಭಾವಗಳನ್ನು ಹೊಂದುವರು

ಜಲ ಆರ್ಚನೆಯಿಂದ ಜನ್ಮ, ಜರೆ ಮತ್ತು ಮರಣಗಳು ದೂರವಾಗಲೆಂದೂ, ಚಂದನ ಅರ್ಚನೆಯಿಂದ ಭವದ ತಾಪ ಶಾಂತವಾಗಲೆಂದೂ, ಅಕ್ಷತೆಯಿಂದ ಅವಿನಾಶಿ ಗುಣಗಳು ಲಾಭವಾಗಲೆಂದೂ, ಪುಷ್ಪಾರ್ಚನೆಯಿಂದ ಕಾಮವಿಕಾರತೆ ನಾಶವಾಗಲೆಂದೂ, ಚರು ( ಹವಿಸ್ಸು ) ಅರ್ಪಿಸುವುದರಿಂದ ಕ್ಷುಧಾ ರೋಗ ಶಾಂತವಾಗುದೆಂದು, ದೀಪ ಬೆಳಗುವುದರಿಂದ ಮೋಹಾಂಧಕಾರವು ನಾಶವಾಗುವುದೆಂದು, ಧೂಪದಿಂದ ಎಂಟು ಕರ್ಮಗಳು ನಾಶವಾಗುವುದೆಂಬ ಫಲಗಳ ಸಮರ್ಪಣೆಯಿಂದ ಮೋಕ್ಷರೂಪ ಫಲ ಪ್ರಾಪ್ತಿಯಾಗುವುದು ಇದು ಅಷ್ಟವಿಧಾರ್ಚನೆಯ ಸಂಕೇತವಾಗಿದೆ "[೮], ಈ ಸಂಕೇತಗಳನ್ನು ಪಾಲಿಸಿಕೊಂಡು ಮಾಡುವ ಪೂಜೆಯು ಪವಿತ್ರವಾದುದು ಎಂದು ಹೇಳಲಾಗಿದೆ.

ಭಾವಗಳನ್ನು ಪರಿಶುದ್ಧಿಗೊಳಿಸುವ ದೇವರ ಪೂಜೆಯ ಕಡೆಗೆ ಶ್ರಾವಕರೆಲ್ಲ ಅಧಿಕ ಶ್ರದ್ಧೆಯನ್ನಿಟ್ಟು ವರ್ತಿಸಬೇಕು. ಪೂಜೆ ಮಾಡುವವರಿಗೆ ಅರ್ಥ ತಿಳಿದಿದ್ದರೆ ಅದು ಬಹಳ ಉತ್ತಮ ಎನ್ನುವುದು ಪೂಜಾ ಉದ್ದೇಶ ಎಂದು ಈ ನಿಟ್ಟಿನಲ್ಲಿ ಜೈನ ಮಹಿಳೆಯು ಪದ್ಯವನ್ನು ಸರಳವಾಗಿ ರಚಿಸಿದ್ದಾರೆ. ಪೂಜೆ ಮಾಡುವ ಸಂದರ್ಭದಲ್ಲಿ ಅರ್ಥವತ್ತಾಗಿ ಹೇಳಲು ಯೋಗ್ಯವಾಗಿದೆ, ಸುಲಭವಾಗಿ ಭಾವವನ್ನು ಪ್ರಚೋದಿಸುವ ಸಾಧನವು ಆಗಿದೆ, ಹೀಗೆ ನಾದವು ಸೇರಿ ಸಾಹಿತ್ಯವನ್ನು ಪ್ರಯೋಗಿಸುವ ಪೂಜೆಯ ಪರಿಣಾಮಕಾರಿಯಾಗಿರುವುದು ಅಂತೆಯೇ ಮಧುರ ಸ್ವರದೊಡನೆ ಬರುವ ಭಾವಗಳನ್ನು ತಿಳಿದುಕೊಳ್ಳಲು ಸುಲಭವೆನಿಸುತ್ತದೆ. ಸಂಗೀತವೂ ಆರ್ಕಷಣೆಯವೂ ಹೌದು. ರೂಢಿಯಲ್ಲಿರುವ ಹಲವು ರಾಗಗಳನ್ನು ರಚಿಸಲಾದ ಅಷ್ಟವಿಧಾರ್ಚನೆಯ ಪೂಜೆಯ ಹಾಡುಗಳನ್ನು ರಾಧಮ್ಮನವರ ಸಂಗೀತ ಪೂಜಾ ಸಂಗ್ರಹದಲ್ಲಿ ಕಾಣಬಹುದು.

" ವಿಜ್ಞಾನಯುಗದ ಪ್ರಭಾವದಿಂದ ಮತ್ತು ಈಗಿನ ಶೈಕ್ಷಣಿಕ ವ್ಯಾಮೋಹದಿಂದ ಈಗಿರುವ ಜೈನರ ಸಂಸ್ಕೃತಿಯು ಕ್ಷಯಿಸುತ್ತಾ ಇದೆ. ದೇವರ ಪೂಜೆಯಲ್ಲಿ ತಾತ್ಸರ, ಗುರುಗಳಲ್ಲಿ ತಿರಸ್ಕಾರ, ಶಾಸ್ತ್ರದ ಅಭ್ಯಾಸದಲ್ಲಿ ನಿರುತ್ಸಾಹ ವ್ರತಾಚರಣೆಯಲ್ಲಿ ಅನಾದರ, ಇವು ನಿತ್ಯ ಜೀವನದಲ್ಲಿ ಕಂಡು ಬರುವ ಕ್ರಿಯೆಗಳು ಆದರೆ ಹೀಗಾಗಬಾರದು ಎಂದು ಸರ್ವೋನ್ನತವಾದ ಧರ್ಮಾಚರಣೆಗೆ ಸ್ಥಾನವಿಲ್ಲದಿದ್ದರು ಉತ್ತಮರು ಸಾಧ್ಯವಾದ ಮಟ್ಟಿಗೆ ಕಾಲಕ್ಕೆ ತಕ್ಕಂತೆ ಧರ್ಮಾಚರಣೆಗಳನ್ನು ಮಾರ್ಪಡಿಸಿಕೊಂಡು ಅದನ್ನು ಉಳಿಸುವ ಪ್ರಯತ್ನ ಮಾಡುವರು."[೯].|

ಈ ಕೃತಿಯಲ್ಲಿ ಕೇವಲ ರಾಧಮ್ಮನವರು ಮಾತ್ರವಲ್ಲದೆ ಅನೇಕ ಕವಿಗಳ ಪೂಜಾ ಪದ್ಯಗಳನ್ನು ಮೂಡಾರು ಧರ್ಮಪಾಲ ಇಂದ್ರ ಒಂದು ಕಡೆ ಸಂಗ್ರಹಿಸಿರುವುದನ್ನು ಕಾಣುತ್ತೇವೆ. " ನೋಂಪಿಗಳಲ್ಲಿ, ನಿತ್ಯ ಪೂಜೆಗಳಲ್ಲಿ, ಷೋಡಶಭಾವನೆಯ ಸಂದರ್ಭದಲ್ಲಿ ಉಪಯೋಗಿಸುವ ಸ್ತೋತ್ರಮಂತ್ರಾದಿಗಳೂ ಈ ಸಂಗ್ರಹದಲ್ಲಿ ಸೇರಿದೆ ಎಂದಿದ್ದಾರೆ ಹಾಗೂ ಕವಯತ್ರಿ ರಾಧಮ್ಮ ಮತ್ತು ಇತರ ಕವಿ, ಕವಯತ್ರಿಗಳು ತಮ್ಮ ಕೆಲಸಗಳನ್ನು ಒತ್ತಟ್ಟಿಗಿಟ್ಟು ಪದ್ಯಗಳಿಗೆ ರಾಗ, ತಾಳ ಕೂಡಿದ ಪೂಜಾ ಕೀರ್ತನೆಗಳು ಹೊರಹೊಮ್ಮುವಂತೆ ಸಹಕರಿಸಿದ್ದಾರೆ "[೧೦], ಎಂದಿದ್ದಾರೆ.

ಜೈನ ಧರ್ಮದಲ್ಲಿ ಅತ್ಯಂತ ವೈಭವೋಪೇತವಾಗಿ ಆಚರಿಸಲ್ಪಡುವ ಸಮವಸರಣ ಪೂಜೆಯ ವಿಧಿ ವಿಧಾನಗಳನ್ನು ಉಪಯೋಗಿಸುವ ಸಾಹಿತ್ಯಗಳನ್ನೂ ಪರಿಣಾಮವಾಗಿ ಸೃಷ್ಟಿಯಾಗುವ ತತ್ಪರಿಣಾಮವನ್ನು

ದೇವಾದಿದೇವತೆಗಳಿಂದಲೂ ಯಕ್ಷ, ಗರುಡ, ಕಿನ್ನರ, ಕಿಂಪುರುಷಾದಿಗಳಿಂದಲೂ ಪ್ರಕೃತಿಯಲ್ಲಿ ಜನಿಸಿದ ಇತರ ಜೀವರಾಶಿಗಳಿಂದಲೂ ಪೂಜೆಗೊಂಬುವ ಜಿನೇಶ್ವರನ ಅನುಗ್ರಹವು ಹೇಗೆ ಪ್ರಾಪ್ತಿಸುತ್ತದೆ ಎಂಬುವುದನ್ನು ಸುಂದರವಾಗಿ ಕವಯತ್ರಿಯು ವರ್ಣಿಸಿದ್ದಾರೆ. ಮನೋಹರ ಕಾರಕವಾಗಿ ಕಂಗೊಳಿಸುವ ಸಮವಸರಣ ಪೂಜೆಯ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿ ಭಾವುಕರ ಮನದ ಭಕ್ತಿಯ ಕದವನ್ನು ತಟ್ಟಿದ್ದಾರೆ.

ಏನು ರಮ್ಯ ಏನು ಸೌಮ್ಯ ಅಮಮ ಸಮವ ಸರಣವು |
ಜ್ಞಾನ ಧರನೆ ತೀರ್ಥಕರನ್ ನಿನ್ನ ಸಭಾಭವನವು ||
ಗಗನದಲ್ಲಿ ರಾಜಿಸಿ ಮಿಗೆ ಸೊಗವ ಬೀರಿ ನಾಲ್ಕುದೆಸೆಗೆ |
ಜಗಕೆ ನೀಡಿ ಶಾಂತಿಯೊಸಗೆ ಮೆರೆವ ಮಹಿಮೆ ನಿನ್ನದು ||
ಭವ ದುಃಖವ ತವೆ ತಗ್ಗಿಸಿ ಶಿವ ಸೌಖ್ಯವ ನೀವುದು || ೧ ||



ಹೇಮದುಯದ ರೂಪ್ಯಮಯದ ರತ್ನಮಯದ ಕೋಪೆಯ
ಕಾಮಧೇನು ಕಲ್ಪ ವೃಕ್ಷರೆಹುದೆ ಜಗದಿ ಸಾಟಿಯು ||
ವರ ಅಶೋಕ ತರುವಿನಲ್ಲಿ ಸುರುವ ಕುಸುಮ ವರುಷದಲ್ಲಿ |
ಮೆರೆವ ಗಂಧಕುಟಿಯೊಳಲ್ಲಿಕಮಲದಳವ ಸೋಂಕದೆ ||
ಶೌರ್ಯದಲ್ಲಿ ನಿಲುವರಾರು ನೀನೆಯೋರ್ವನಲ್ಲದೆ || ೩ ||

ರಮಣೀಯವು ಸೌಮ್ಯವೂ ಆದ ಈ ಪೂಜಾ ವಿಧಾನವನ್ನು ಆಚರಿಸುವುದರಿಂದ ಜಿನೇಶ್ವರನು ಸಂತೃಪ್ತಿಗೊಂಡು ಸ್ವರ್ಗ ಸೌಭಾಗ್ಯವನ್ನು ಭುವಿಯ ಆಸ್ತಿಕರಿಗೆ ನೀಡುತ್ತಾನೆ. ಎಂಬುವುದನ್ನು ಖಡಾಖಂಡಿತವಾಗಿ ವಿವರಿಸಿದ ಇವರು ಸಂಸಾರ ಬಂಧನವೆಂಬ ಶೃಂಖಲೆಯಿಂದ ಬಿಡುಗಡೆ ಹೊಂದಿ ಜಿನೇಶ್ವರನ ಸಾಲೋಖ್ಯವನ್ನು ಪಡೆಯುವ ಮಾಧ್ಯಮ ಸಮವಸರಣ ಪೂಜೆ ಎಂದಿದ್ದಾರಲ್ಲದೆ ಶೋಕ, ಶೋಕರಹಿತ ಜೀವನವನ್ನು ಜಿನೇಶ್ವರನು ಪ್ರಧಾನಿಸುತ್ತಾನೆ ಎನ್ನುವುದನ್ನು ಸ್ಥೂಲವಾಗಿ ವಿವರಿಸಿದ್ದಾರೆ.

ಸೊಂಪನೀವ ಸೊಬಗನೀವ ತರುಲತಾ ಸಮೂಹವೋ |
ಕಂಪ ನೀವ ಪೆಂಪನೀವ ಫಲಗಳ ಸಂದೋಹವೊ ||
ಸುಮನ ಸುರಭಿಗಾಳಿಯೇ ಮೊರೆಯುವ ಭೃಂಗಾಳಿಯೋ |
ಶುಕದ ಪಿಕದ ಕೇಳಿಯೋ ಅಲ್ಲೆಲ್ಲವೂ ಮೆರೆವುದೈ ||
ಕಣ್ಣನೆಳೆವ ಮನವ ಸೆಳೆವ ವನಂ ಶೋಭೆಗೊಡುವುದೈ || ೫ ||

ಇಂತಹ ಪುಣ್ಯ ಆರಾಧನೆಯನ್ನು ನಡೆಸಿದ್ದಲ್ಲಿ ಜಿನೇಶ್ವರನು ಕೃಪೆದೋರಿ ತ್ನನ ದಿವ್ಯಾನುಗ್ರಹವನ್ನು ಬೀರುತ್ತಾನೆ ಎಂಬುವುದಕ್ಕೆ ಅದರಿಂದಾಗುವ ಸತ್ಪರಿಣಾಮದ ಉಲ್ಲೇಖದೊಂದಿಗೆ ಸ್ಪಷ್ಟ ಪಡಿಸಿದ್ದಾರೆ. ಗಿಡ ಮರಗಳೆಲ್ಲವು ಹಚ್ಚ ಹಸಿರಾಗಿ, ಹಣ್ಣು ಹಂಪಲುಗಳನ್ನು ಯಥೇಚ್ಚವಾಗಿ ನೀಡುವುದರೊಂದಿಗೆ ಬಳಲಿದವರ ಬಳಲಿಕೆಯನ್ನು ನಿವಾರಿಸುತ್ತದೆ. ತುರುಗಳು ದೇವಲೋಕದ ಕಾಮಧೇನುವಿನಂತೆ ಸಮೃದ್ಧಿಯಾದ ದುಗ್ಧ ಸಂಪತ್ತನ್ನು ನೀಡುತ್ತವೆ. ಕಾಲಕಾಲಕ್ಕೆ ಸರಿಯಾಗಿ ವರ್ಷಧಾರೆ ಸುರಿದು ಭೂಮಿ ಹಸನಾಗಿ ಭೂದೇವಿ ಶೃಂಗರಿಸಲ್ಪಟ್ಟಳೋ ಎಂಬಂತೆ ಸುಭಿಕ್ಷತೆ ಮೂಡುತ್ತದೆ. ನದಿಗಳು ಸದಾ ತುಂಬಿ ಹರಿಯುವ ಮೂಲಕ ಜಲ ಕ್ಷಾಮವನ್ನು ನಿವಾರಿಸುತ್ತವೆ. ಪ್ರಕೃತಿ ದೇವಿಯು ಸಂತುಷ್ಟಿಗೊಂಡು ತನ್ನ ಮಡಿಲಿನ ಆಸರೆಯಲ್ಲಿರುವ ಸಕಲ ಜೀವಿಗಳನ್ನು ಕಾಪಾಡುತ್ತಾಳೆ ಪ್ರತಿಯೊಂದು ಸೂರ್ಯೋದಯವು ನಿತ್ಯ ನೂತನವಾಗಿ ಲೋಕದಲ್ಲಿ ಎಲ್ಲವೂ, ಎಲ್ಲರೂ ಕ್ಷೇಮದಿಂದಿರುತ್ತಾರೆ. ಎನ್ನುವುದನ್ನು ಇಲ್ಲಿ ಕಾಣಬಹುದು.

ಜೈನ ಮತದ ಭಾಗ್ಯ ಚಂದ್ರ ಕಾವೆಯೋಗಿ ವರ್ಯರ |
ದಿವ್ಯ ಧ್ವನಿ ನಿಯಮೊಳಗಿಸುತ್ತ ನಿತ್ಯ ಪೊರೆವ ಭವರ ||
ನೆರನಿಳಿಂಪ ಕಿನ್ನರರ ಗರುಡ ಗಂಧರ್ವರ |
ಉರಗ ಖಚರ ಕಿನ್ನರ ಕಿಂಪುರುಷನ ಜ್ಯೋತಿಷ್ಯರ ||
ಜೀಯ ನಿನ್ನ ಭಜಿಪ ಯಕ್ಷರಾಕ್ಷಸಾಧ್ಯರೆಲ್ಲರ || ೯ ||

ತಮ್ಮೊಳಿರುವ ದ್ವೇಷವಳಿದು ಸ್ನೇಹದಿಂದ ಕಲೆವವು |
ಮೃಗದ ಜಾಲಖಗದ ಜಾಲ ಪ್ರಾಣಿಮಾತ್ರವೆಲ್ಲವು ||
ನಿನ್ನ ನುಡಿಯನಾಲಿಸುತಲಿ ಕಣ್ಣೆನತ್ತಿಈ ಕ್ಷಿಸುತಲಿ |
ತನುವ ಮರೆದು ಲೀನತೆಯಲಿ ನಿನ್ನ ಬಳಿಯೊಳಿರುವುವು ||
ಆವ ವಶ್ಯ ಮಂತ್ರ ಶಕ್ತಿ ದೇವ ನಿನ್ನೊಳಿರುವುದೊ || ೧೦ ||

ಧೈರ್ಯದಿಂದ ಸ್ಥೈರ್ಯದಿಂದ ಮುರಿದೆ ಜವನ ದರ್ಪಮಂ |
ಶೌರ್ಯದಿಂದ ಸತ್ವದಿಂದ ತರಿದೆ ನೀ ಕಂದರ್ಪನಂ ||
ಎನಿತೊ ಹಲವು ಜನ್ಮದಿಂದ ಪೊರ್ದಿದ ದುಷ್ಕರ್ಮದಿಂದ |
ತೊಳಲಿ ಭವದಿ ಬಳಲಿ ಬಂದ ಎನ್ನನೆತ್ತ ಬಾರೆಯೂ ||
ನೀನು ಪೋದ ಪಥವನೆನಗೆ ತೋರಿ ನಡೆಸಲಾರೆಯೋ || ೧೧ ||

ಅಸಮ ಧರ್ಮವೆಂಬ ವೃಷ್ಟಿ ವಸುಧೆಗೆಲ್ಲ ಸುರಿಸಿದೆ |
ಹೊಸತು ಚೇತನವನು ತುಂಬಿ ಭವ್ಯರ ನುದ್ಧರಿಸಿದೆ ||
ಧರ್ಮಚಕ್ರವನ್ನು ಧರಿಸಿ ಕರ್ಮವೈರಿಗಳನು ಜಯಿಸಿ |
ನಿರ್ಮಲಾಕ್ಷ ಯೋಗವೆರಸಿ ಮುಕ್ತಿ ಸತಿಯ ನೊಲಿಸಿದೆ ||
ನಿನ್ನ ಚರಣವನ್ನು ಸ್ಪರಿಪೆ ಎನ್ನ ಪೊರೆ ದಯಾನಿಧೆ || ೧೨ ||

ಜೈನಮತ ಭಾಗ್ಯಂಬು ನಿಧಿ ಚಂದ್ರನಾದ ಜಿನೇಶ್ವರನ ಪ್ರಭಾನವೆಷ್ಟು ಅವುಗಳಿಂದ ಆಗುವ ಸತ್ಪರಿವರ್ತನೆಗಳು ಎಷ್ಟು ಎಂಬುವುದನ್ನು ವಿವರಿಸಿದ ಕವಯತ್ರಿಯು. ಆತನ ಶೌರ್ಯ, ಧೈರ್ಯ ಮತ್ತು ಅನುಗ್ರಹ ಇವುಗಳನ್ನು ವರ್ಣಿಸಿದ್ದಾರೆ. ಅಂತಹ ಮಹಾಮಹಿಮನು ಪೂರ್ವಾರ್ಜಿತ ಕರ್ಮಗಳಿಗನುಸಾರವಾಗಿ ಈ ಭವದಲ್ಲಿ ನೊಂದು ಬೆಂದು ತೊಳಲಾಡುವ ತನ್ನನ್ನು ಈ ಸಂಕಷ್ಟಗ ಳಿಂದ ಪಾರು ಮಾಡುವ ಮಹಾ ಶಕ್ತಿಯೆಂದಿದ್ದಾರೆ ಸ್ವಭಾವ ಜನ್ಯವಾದ ವೈಷಮ್ಯವನ್ನುಳಿದು ಪರಸ್ಪರ ಸ್ನೇಹ ಭಾವವನ್ನು ಪ್ರಕಟಿಸುವ ಮೃಗ, ಖಗ, ಉರಗಾದಿಗಳನ್ನು ಸತ್ಪರಿವರ್ತನೆಯನ್ನು ಮಾಡುವ ಸ್ವಾಮಿಯು ಮಾಂಸಾಸ್ತಿಗಳಿಂದ ಕೂಡಿದ ತನ್ನ ದೇಹದಲ್ಲಿ ಸೇರಿಕೊಂಡಿರುವ ದ್ವೇಷ ಅಸೂಯೆಗಳೆಂಬ ಕಳಂಕವನ್ನು ತೊಡೆದು ದಿವ್ಯ ದೇಹ ಧಾರಿಯಾಗುವಂತೆ ಅನುಗ್ರಹಿಸಿ ತನ್ನ ಸಾನಿಧ್ಯವೆಂಬ ಸಾಮ್ರಾಜ್ಯ ವನ್ನು ನೀಡಲಿ ಎಂದು ಬೇಡಿಕೊಂಡಿದ್ದಾರೆ.

ಕವಯತ್ರಿಯು 'ಧನ್ಯನಾಗಿಕೊ ' ಎಂಬ ಶೀರ್ಷಿಕೆಯಡಿ ರಚಿಸಿದ ಈ ಕೆಳಗಿನ ಪದ್ಯವು ನೀತಿಬೋದ ಪ್ರದವಾಗಿದೆ. ತಾನು ತನ್ನನ್ನು ತಿದ್ದಿಕೊಳ್ಳದ ಹೊರತು ಪೂರ್ವ ಜನ್ಮದ ಪುಣ್ಯ ವಿಶೇಷತೆಯಿಂದ ಪ್ರಾಪ್ತಿಸಿದ ಈ ಜನ್ಮವು ಸಾರ್ಥಕವಾಗದು ಎಂದು ಉದಾಹರಣೆ ಸಹಿತ ವ್ಯಕ್ತಪಡಿಸಿದ್ದಾರೆ.

ನೀನು ನಿನ್ನ ಮನದ ಮುಕುರವನ್ನು ನೋಡಿಕೋ |
ನಿನ್ನೊಳಿರುವ ಕುಂದು ಕೊರತೆ ಗಳನು ತಿದ್ದಿಕೊ || ಪ ||

ಕ್ರೋಧ ಮಾನ ಮಾಯಾಲೋಭ ಮದವು ಮತ್ಸರ |
ಆದಿ ದುರ್ವಿಕಾರ ಭಾವ ಮಲಿನ ತೊಳೆದು ಕೊ ||
ಶೋಧಿಸುತಲಿ ನಿನ್ನ ನಿಜಸ್ವ - ಭಾವವರಿತುಕೊ || ೧ ||

ಅನ್ಯ ವಿಷಯದೆಡೆಗೆ ಹರಿವ ಮನವ ಬಿಗಿದುಕೊ |
ನಿನ್ನ ಇಂದ್ರಿಯಗಳ ಒಲಿದು ವಶವ ಮಾಡಿಕೊ ||
ಅನ್ಯದ್ರವ್ಯ - ದೊಡನೆ ಬೆರೆತ ನಿನ್ನ ನರಸಿಕೊ || ೨ ||

ತನುವು ಜಡಪ - ದಾರ್ಥ  ನೀನು ಜ್ಞಾನ ಚೇತನ |
ಗುಣ ಸ್ವಭಾವ - ದಂತರಗಳ ನೆನೆದು ಕಂಡುಕೋ ||
ಮನದಿ ಮಥಿಸಿ ನಿನ್ನ ನೀನೆ ಬೇರೆ ನೋಡಿಕೊ || ೩ ||

ಬಾಹ್ಯ ಜಗವ ಮರೆದು ಅಂತಃಚಕ್ಷು ತೆರೆದು ಕೋ |
ಮೋಹ ಪರೆಯ ಹರಿದು ಶುದ್ಧ - ದೃಷ್ಟಿ ಪಡೆದುಕೊ ||
ಸೋಹಂಧ್ಯಾನದಲ್ಲಿ ನಿರತ ಲೀನನಾಗಿಕೊ || ೪ ||

ಜ್ಞಾನ ಮಯ ಚೈತನ್ಯಮಯ ಸ್ವರೂಪ ದರ್ಶನ |
ನೀನು ಪಡೆದು ಮನುಜನ್ಮ ಸಫಲ ಮಾಡಿಕೊ ||
ಸ್ವಾನಂದಾನುಭವವ ಸವಿದು ಧನ್ಯನಾಗಿಕೋ || ೫ ||

ಕನ್ನಡಿಯನ್ನು ಕೈಯಲ್ಲಿ ಹಿಡಿದು ತಮ್ಮ ಮುಖವನ್ನು ನೋಡಿಕೊಂಡಾಗಲೆ ನಮ್ಮ ಸ್ಪಷ್ಟ ಪ್ರತಿಬಿಂಬ ಗೋಚರಿಸುತ್ತದೆ. ಅಂತೆಯೇ ನಿನ್ನ ಮನಸ್ಸೆಂಬ ಕನ್ನಡಿ ಸದಾ ಪರಿಶುದ್ಧವಾಗರಲಿ ಅದರಲ್ಲಿ ನಿನ್ನನ್ನು ನೀನು ನೋಡಿಕೊಂಡು ನಿನ್ನಲ್ಲಿರಬಹುದಾದ ಕಲೆಗಳನ್ನು ತೊಳೆದು ಕೊಂಡಾಗಲೇ ಸುಂದರವಾದ ಪರಿಶುದ್ಧತೆ ಗೋಚರಿಸುತ್ತದೆ. ಇಲ್ಲಿ ಕಲೆಗಳೆಂದರೆ ಕಾಮ ಕ್ರೋಧಾದಿ ಅರಿಷಡ್ವೈರಿಗಳು ಅವುಗಳಿಂದಾಗಿ ಉತ್ಕರ್ಷಕ್ಕಿಂತ ಪಥನವೇ ಹೆಚ್ಚು ಹಾಗಾಗಿ ಆ  ಅರಿಗಳನ್ನು ಜಯಿಸುವುದರ ಮೂಲಕ ಇಂದ್ರಿಯಗಳನ್ನು ನಿಗ್ರಹಿಸಿಕೊ. ನಾನು ಏನು ಮತ್ತು ಎಷ್ಟು ಯಾಕೆ ಎನ್ನುವುದನ್ನು ಚಿತ್ತದಲ್ಲೇ ಮತಿಸಿ ನಾನು ಸೋಹಂ ಭಾವ ಎಂಬ ಮತಿತಾರ್ಥವನ್ನು ತಿಳಿದುಕೋ. ಪರನಿಂದನೆಯನ್ನು ಮಾಡದೆ ಪರದ್ರವ್ಯವನ್ನು ಅಪೇಕ್ಷಿಸದೆ ಅನುಭೋಗಿಸದೆ, ಸ್ಪಟಿಕ ಸದೃಶವಾದ ಪಾರದರ್ಶಕ ಜೀವನವನ್ನು ನಡೆಸು. ಭಗವಂತನ ಮೇಲೆ ಭಕ್ತಿ ಹಾಗೂ ಆ ಭಕ್ತಿಯ ಮೂಲ ಭಯ ಇವೆರಡೂ ನಿನಗೆ ಮುಕ್ತಿ ಪಥವನ್ನು ತೋರಿಸುವ ದೀಪಿಕೆಯಾಗುತ್ತದೆ. ಆ ಮೂಲಕ ಪಡೆದ ಈ ಮನುಷ್ಯ ಜೀವನವು ಸಾರ್ಥಕಗೊಳ್ಳುವುದರೊಂದಿಗೆ ನೀನು ಧನ್ಯನಾಗುವೆ.

ದೇವರ ನಾಮಗಳಿಗೆ ಶಾಸ್ತ್ರೀಯ ಸಂಗೀತದ ರಾಗ ತಾಳಗಳನ್ನು ಅಳವಡಿಸಿ ರಚಿಸುರುವುದು  ಹಾಗೂ ಅವರ ಸಾಹಿತ್ಯ ರಚನೆಯ ಜೊತೆಗೆ ಸಂಗೀತ ಜ್ಞಾನದ ಅರಿವಿನ ಆಳವೂ ತಿಳಿಯುತ್ತದೆ. ಅನೇಕ ಪ್ರಸಿದ್ಧವಾದ ಪದ್ಯಗಳ ರಾಗ, ತಾಳಕ್ಕನುಣವಾಗಿ  ಜಿನ ಪದ್ಯ ಸ್ತುತಿಗಳನ್ನು ರಚಿಸಿದ್ದಾರೆ.

( ಹೇ ಮಾಲಿಕ್ ತೇರೇ ಬಂದೇ ಹಮ್................ಎಂಬಂತೆ )     (ಝಂಪೆತಾಳ)

ಆ ಮೌನವೇಕಾಲಿಸೋ

ಶ್ರೀ ಪಾರ್ಶ್ವಜಿನ ಪಾಲಿಸೋ ||

ಎಂದಾಡುವೆ | ನಿಂದು ನಲಿದಾಡುವೆ |

ಬಂದು ಮನದಲ್ಲಿ ಮನೆ ಮಾಡುವೆ || ಪಲ್ಲವಿ ||

(ತನು ಡೋಲೆ ಮೇರೆ ಮನ ಡೋಲೆ ................. ಎಂಬಂತೆ) (ಆದಿತಾಳ)

ಜಿನ ಮಹಾವೀರ | ಗುಣಗಣಸಾಗರ | ಭವದ ಸಮುದ್ರ ಪಾರ - ಧೀರ

ಜ್ಞಾನ ಪ್ರಭಾಮಯ ಭಾಸುರ || ಪಲ್ಲವಿ ||

ಹೀಗೆ ಕನ್ನಡದ ಕೆಲವು ಪದ್ಯಗಳು " ಯಾರಿಗೆ ಯಾರುಂಟು ಯೆರವಿನ ಸಂಸಾರ" ," ಭಾಗ್ಯದ ಲಕ್ಷ್ಮೀ ಬಾರಮ್ಮ" , " ರಘುಪತಿ ರಾಘವ ರಾಜರಾಮ್"

**5.1.5 - ಸಂಗೀತ ಪೂಜಾಷ್ಟಕ :** ಈ ಕೃತಿಯ ಮುನ್ನುಡಿಯಲ್ಲಿ ದೇವೇಂದ್ರ ಕೀರ್ತಿ ಭಟ್ಟಾರಕ ಸ್ವಾಮಿಗಳು, ಇವರು ಹೀಗೆನ್ನುತ್ತಾರೆ. " ಕನ್ನಡ ಸಾಹಿತ್ಯಕ್ಕೆ ಪಂಪ, ರನ್ನ, ಜನ್ನ, ನಾಗವರ್ಮ, ನಾಗಚಂದ್ರ, ರತ್ನಾಕರನಂತಹ ಶ್ರೇಷ್ಠ ಕವಿಗಳನ್ನು ಕೊಟ್ಟ ಜೈನ ಸಮಾಜ ಕವಯತ್ರಿಯರನ್ನು ಯಾಕೆ ಕೊಡಲಿಲ್ಲ ಎಂದು ಪ್ರಶ್ನಿಸಿದಾಗ ಕವಯತ್ರಿ ರಾಧಮ್ಮನವರ ಬಗೆ ಹೇಳಿ ಸಮಾಜದ ಗೌರವವನ್ನು ಹೆಚ್ಚಿಸುವ ಪ್ರಯತ್ನವನ್ನು ಮಾಡಿದ್ದೆವು ಎಂದು ಹೇಳುತ್ತಾರೆ "[೨೧]. ಯಾರ ಆಶ್ರಯವೂ ಇಲ್ಲದೆ ಕೇವಲ ತನ್ನ ಪತಿಯಿಂದ ಸಿಕ್ಕಿದ ಅಲ್ಪ ಸ್ವಲ್ಪ ಪ್ರೋತ್ಸಾಹದಿಂದಲೇ ಕಾವ್ಯರಚನೆಗಳನ್ನು ಮಾಡಿದರು. ಇಂತಹ ಮೇರು ವ್ಯಕ್ತಿತ್ವದ ಲೇಖಕಿಯ ಕೃತಿಗಳನ್ನು ಒಂದೇ ಕಡೆ ಸಿಗುವಂತಾಗಬೇಕೆಂದು ಆಶಿಸಿರುವ ಭಟ್ಟಾರಕರು ಮಹಾಸ್ವಾಮೀಗಳು ಕವಯತ್ರಿಯ ಸ್ವಂತ ಊರಾದ ಕಾರ್ಕಳ ತಾಲ್ಲೂಕಿನ ನೆಲ್ಲಿಕಾರು ಗ್ರಾಮದಲ್ಲಿ ಭಗವಾನ್ ಶ್ರೀ ೧೦೦೮ ಅನಂತನಾಥ ಸ್ವಾಮೀ ಚೈತ್ಯಾಲಯದ ಜೀರ್ಣೋದ್ಧಾರವಾಗಿ ಅಲ್ಲಿ ಮಾರ್ಚ್ ತಿಂಗಳಿನ ದಿನಾಂಕ ೧೭ ರಿಂದ ೨೫ ರ ವರೆಗೆ ಪಂಚಕಲ್ಯಾಣ ಮಹೋತ್ಸವವು ನೇರವೇರುವಂದು ಸಂಗೀತ ಪೂಜಾಷ್ಟಕ ಎಂಬ ಹೆಸರಿನಲ್ಲಿ ರಾಧಮ್ಮನವರ ಕೃತಿಗಳನ್ನು ಪ್ರಕಟಿಸಿದರು ಇದರಲ್ಲಿ ಅದೇ ಊರಿನವರಾದ ಇನ್ನೋರ್ವ ಸಾಹಿತಿ ಚಂದಯ್ಯ ಶಾಸ್ತ್ರೀಗಳು ಬರೆದ ಕೃತಿಗಳನ್ನು ಸೇರಿಸಲಾಗಿದೆ.

' ಸಂಗೀತ ಪೂಜಾಷ್ಟಕ ' ದಲ್ಲಿ ಅರಹಂತ ಪರಮೇಷ್ಟಿಗಳ ಪೂಜೆ ಕಂದ ಪದ್ಯದಲ್ಲಿ ಆರಂಭಿಸಿ ಖ್ಯಾತ ಕರ್ನಾಟಕ ವೃತ್ತದಲ್ಲಿ ಒಂದಾದ ಮಹಾಸ್ರಗ್ಧರಾ ವೃತ್ತದಲ್ಲಿ ರಚಿಸಲಾಗಿದೆ. ಪೂಜಾರಂಭ ಮಾಡುವ ಬಗ್ಗೆ ಜಿನೇಶ್ವರನನ್ನು ವಿವಿಧ ರೀತಿಯಲ್ಲಿ, ವಸ್ತುಗಳಲ್ಲಿ, ಮಂಗಳ ದ್ರವ್ಯಗಳನ್ನು ಅರ್ಪಿಸುವಾಗ ಹೇಳಲಾಗುವ ವಿವಿಧ ಪದ್ಯಗಳನ್ನು ನಾವೀ ಕೃತಿಯಲ್ಲಿ ಕಾಣಬಹುದು.

ಈ ಕೃತಿಯಲ್ಲಿ ಕವಯತ್ರಿ ಕನ್ನಡ, ಸಂಸ್ಕೃತಗಳೆರಡೂ ಭಾಷೆಗಳಲ್ಲಿರಚಿಸಿದ ದೇವತಾಸ್ತುತಿಗಳು ಭಜನೆಗಳು ಹಾಗೂ ಭಕ್ತಿ ಗೀತೆಗಳನ್ನು ಕಾಣಬಹುದು. ಒಂದೊಂದು ರಾಗವನ್ನು ಛಂದಸ್ಸಿನಲ್ಲಿ ಬರೆಯಲಾಗಿದೆ. ಬಾಹುಬಲಿ ಜಿನದೇವನ ಸ್ತುತಿಯೆ ಹಾಡೊಂದು ಈ ರೀತಿಯಿದೆ.

ಗರ್ವ ನಿನಗಿನಿಸಿಲ್ಲ ಹೃದಯದೊಳದೊಡೆಯು |
ಗರುವಿಕೆಯ ಗಂಡು ನೀನೇ ಜಗಕೆ ಅಲ್ಲದೊಡೆ |
ಸರ್ವಮೃಗ ಪಕ್ಷಿ ಘುಟ ಸರ್ಪಂಗಳಿಂ ನಿಬಿಡಮಾಗಿರ್ದ ಕಾಂತಾರದೊಳ್ ||
ಓರ್ವನೇ ನಿಂತು ಬಿಸಿಲಿನ ಬೇಗೆಯಂ ತಡೆದು |
ಗಾರುಗೊಳಿಸುವ ಕ್ಷುಧಾತಕೃಷೆಗಳನ್ನೊತ್ತಿಟ್ಟು |
ಚಾರುತಪದಿಂ ಮುಕ್ತಿ ಕನ್ಯೆಯ ನ್ನೊಲಿಸುವೆಯ ಬಾಹುಬಲಿ ಜಿನದೇವನೇ ? || ೧ ||

ಬಾಹುಬಲಿ ಜಿನದೇವರು ಇಷ್ಟಭೋಗಾದಿ ರಾಜ್ಯಗಳ ತೊರೆದು ಬೆಟ್ಟದ ಮೇಲೆ ಕಠಿಣ ತಪಸ್ಸು ಕೈಗೊಳ್ಳುವ ಚಿತ್ರಣ ಸರ್ವ ಪರಿತ್ಯಾಗಿಯ ಚಿತ್ರಣವನ್ನು ಇಲ್ಲಿ ಕಾಣಬಹುದು. ಈ ಪದ್ಯವನ್ನು ರಾಧಮ್ಮನು ವಾರ್ಧಕ ಷಟ್ಪದಿಯಲ್ಲಿ ರಚಿಸಿದ್ದಾರೆ. ಪರಮಾತ್ಮನ ಗುಣಗಳನ್ನು ಪರಿಭಾವಿಸಿವ ಸ್ಪಂದಿಸುವ ಮನಸ್ಸನ್ನು ಇವರ ಕವಿತೆಗಳಲ್ಲಿ ಕಾಣಬಹುದಾಗಿದೆ. ಕವಯತ್ರಿಯ ವಿನಮ್ರವಾದ ಭಕ್ತಿ ಭರಿತವಾದ, ಸುಸಂಸ್ಕೃತ ಮನಸ್ಸನ್ನು ಕಾಣಬಹುದು.

ಆರಾಧನಾ ಪದ್ಧತಿಯ ಶ್ಲೋಕಗಳು ಪ್ರಾಕೃತ , ಸಂಸ್ಕೃತದಲ್ಲೇ ಊರ್ಜಿತದಲ್ಲಿದ್ದ ಕಾಲಘಟ್ಟದಲ್ಲಿ ಜನಸಾಮಾನ್ಯರು ಓದಬಹುದಾದ ಅರ್ಥೈಯಿಸಿಕೊಳ್ಳಬಹುದಾದ ರೀತಿಯಲ್ಲಿ ಸಂಗೀತ ಪೂಜಾಷ್ಟಕ ಎಂಬ ಕೃತಿಯ ಮೂಲಕ ಸಂಗೀತದ ಮಾಧ್ಯಮವನ್ನು ಆಧರಿಸಿ ರಚಿತವಾದ ಕೃತಿ. ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದ ಭಜನೆ, ಸಂಗೀತ, ಸಿನೇಮ ಹಾಡುಗಳು ಹಿಂದಿ, ಕನ್ನಡ ಭಾಷೆಗಳ ಇತರ ಜನಪ್ರಿಯ ಗೀತೆಗಳ ಧಾಟಿಯನ್ನು ಅನುಸರಿಸಿ ತಾಳ ಬದ್ಧವಾಗಿಯೂ ಲಯಬದ್ಧವಾಗಿಯೂ, ಛಂದೋ ಬದ್ಧ, ಪ್ರಾಸಬದ್ಧವಾಗಿಯೂ ರಚಿಸಿ ಪ್ರಚಾರಿಸುವ ಮೂಲಕ ಜೈನ ಧರ್ಮದ ಪ್ರಚಾರವನ್ನು ತನ್ಮೂಲಕ ಭಕ್ತಿಯನ್ನು ಮೂಡಿಸಿದ ಕವಯತ್ರಿಯು ಈ ಕೃತಿಯಲ್ಲಿ ಜೈನ ತೀರ್ಥಂಕರರನ್ನು ಕುರಿತ ಆರಾಧನೆ ಮತ್ತು ಕೀರ್ತನೆಗಳನ್ನು ರಚಿಸಿ ನೀಡಿದ್ದಾರೆ. ಈ ಕೃತಿಯಲ್ಲಿ ಕೆಳಕಂಡ ತೀರ್ಥಂಕರರ ಪೂಜಾ ಮಂತ್ರಗಳಿವೆ.

೧. || ಅರಹಂತಪರಮೇಷ್ಠಿಗಳ ಪೂಜೆ || ಸಮವಸರಣದಲ್ಲಿ ||
೨. || ಸಿದ್ಧ ಪರಮೇಷ್ಠಿಗಳು ಪೂಜೆ ||
೩ | || ಚಂದ್ರನಾಥ ಸ್ವಾಮೀ ಪೂಜಾ ||
೪ | || ಅನಂತ ತೀರ್ಥಂಕರ ಪೂಜಾ ||
೫ | || ಪಾರ್ಶ್ವನಾಥ ಸ್ವಾಮೀ ಪೂಜಾ ||
೬ | || ಮಹಾವೀರ ಸ್ವಾಮೀ ಪೂಜಾ ||

೭ || ನವದೇವತಾ ಪೂಜಾ ||

೮ || ಬಾಹುಬಲಿ ಸ್ವಾಮೀ ಪೂಜಾ ||

೯ || ಸರಸ್ವತಿ ಪೂಜಾ ||

೧೦ || ಜಿನವಾಣಿ ಪೂಜಾ ||

೧೧ || ಗಣಧರ ಪೂಜಾ ||

ಕುಲದೇವದೇವಿಯರ ಪೂಜೆಗಳು

೧ || ವೀರ ಬ್ರಹ್ಮ ಯಕ್ಷ ಪೂಜಾ ||

೨ || ಜ್ವಾಲಾಮಾಲಿನೀ ದೇವಿ ಪೂಜಾ ||

೩ || ಪದ್ಮಾವತೀ ದೇವೀ ಪೂಜಾ ||

೪ || ಷೋಡಶೋಪಚಾರ ಪೂಜಾ ||

ಆರಾಧಿಸುವ ವಿಧಿ ವಿಧಾನವನ್ನು ಶಾಸ್ತ್ರಬದ್ಧವಾಗಿ ತಮ್ಮ ರಚನೆಯಲ್ಲಿ ಕೂಡ ಮಾಡಿದ್ದಾರೆ . ಕವಿಯ ಈ ಸಾಧನೆಯಿಂದ ಅವರಲ್ಲಿದ್ದ ಸದ್ಗುಣ ಗ್ರಾಹ್ಯ ಸರ್ವಸಮರ್ಪಣಾ ಮನೋಭಾವ ಮತ್ತು ಸ್ವೀಕಾರ ಮನೋಭಾವ ರೂಪಿತವಾಗುತ್ತದೆ. ಪ್ರತೀ ಪದ್ಯದ ರಚನೆಯಲ್ಲಿ ವಿಭಿನ್ನತೆಯೊಂದಿಗೆ ಭಕ್ತಿಯ ಪರಕಾಷ್ಠತೆಯನ್ನು ಕಾಣಬಹುದಾಗಿದೆ. ಭಕ್ತ ಹಾಗೂ ಭಗವಂತನ ಸಂಪರ್ಕಕ್ಕೆ ಮಾಧ್ಯಮವಾದ ಈ ಭಜನೆಯು ಜನಪ್ರಿಯವಾಗಲಿ ತನ್ಮೂಲಕ ಪ್ರಾಪಂಚಿಕರು ಆಸಕ್ತರಾಗಲಿ ಎಂಬುವುದು ಕವಯತ್ರಿಯ ಭಾವನೆಯಾಗಿದೆ. ಕವಯತ್ರಿಯ ಮನೋಧರ್ಮಕ್ಕೆ ಹಿಡಿದ ಕೈಗನ್ನಡಿಯೋ ಎಂಬ ಹಾಗೆ ಅವರಿಂದ ರಚಿತಗೊಂಡ ಕೆಲವು ರಚನೆಗಳನ್ನು ಇಲ್ಲಿ ನೀಡಲಾಗಿದೆ.

ಕವಯತ್ರಿಯು ತನ್ನ ಗಚನೆಯು ಪ್ರಚಾರ ಪಡೆಯುವ ದೃಷ್ಟಿಯಿಂದ ಕೆಲವು ಅತ್ಯುತ್ತಮ ಸಾಹಿತ್ಯವನ್ನೊಳಗೊಂಡ ಪದ್ಯಗಳ ಧಾಟಿಯನ್ನು ಅನುಸರಿಸಿರುವುದನ್ನು ನಾವು ಕಾಣಬಹುದು. ಆ ಪದ್ಯಗಳೆಲ್ಲ ಅಂದಿನ ಕಾಲದಲ್ಲಿ ಜನಾಧರಣೆ ಪಡೆದುದನ್ನು ಗಮನಿಸಿಯೇ ಕವಯತ್ರಿಯು ಆ ಸಾಧನೆ ಮಾಡಿರಬಹುದು ಎನ್ನುವುದು ಗಮನಾರ್ಹ ಒಟ್ಟಿನಲ್ಲಿ ಭಕ್ತಿಯ ಪಥದಲ್ಲಿ ಭಕ್ತನನ್ನು ನಡೆಯಿಸಿ ಭಗವಂತನ ಸಾನಿಧ್ಯವನ್ನು ತಲುಪಲು ಕವಯತ್ರಿಯು ನೀಡಿದ ಅವಕಾಶ ಎನ್ನುವುದಕ್ಕೆ ಎರಡು ಮಾತಿಲ್ಲ ಇದಕ್ಕೆ ಉದಾಹರಣೆಗಳನ್ನು ಈ ಕೆಳಗೆ ಪಟ್ಟಿ ಮಾಡಲಾಗಿದೆ.

೧. ಕಲಿಯುಗದಲಿ ಹರಿನಾಮವ.... ( ಪುರಂದರದಾಸ ಕೀರ್ತನೆ )

೨. ಬ್ರೂಹಮುಕುಂದೇತಿ......

೩. ನಿಜ ಮಾನವರು ನಾ ಸಖಿಯೇ........( ಚಲನಚಿತ್ರದ ಹಾಡು )

೪. ಪ್ರಭು ನನ್ನದೆಯಾ ನಿನ್ನಯಾ......... ( ಕನ್ನಡ ಸಿನೆಮ ಹಾಡು )

೫. ಘನಶ್ಯಾಮ ಸುಂದರಾ .....

೬. ರಘುಪತಿ ರಾಘವ ರಾಜಾರಾಂ.......( ಗಾಂಧಿಜಿಯವರು ರೂಪಿಸಿದ ಭಜನೆ )

೭ ತನು ಡೋಲೆ ಮೇರೆ ಮನ ಡೋಲೆ.......... ( ಹಿಂದಿ ಚಲನಚಿತ್ರ ಗೀತೆ )

೮ ಜಾಯೆ ತೂ ಜಾಯೆ ಕಹಾಂ......( ಹಿಂದಿ ಚಲನಚಿತ್ರ ಗೀತೆ )

೯ ಹರಿಯೆ ನಿನ್ನ ಸ್ಮರಣೆಯನ್ನು ಮರೆಯಲಾರೆನು........

೧೦ ಹರಿಯೆ ನಿನ್ನ ವಿರಸ ಭಾವ ..........( ಚಲನಚಿತ್ರ ಗೀತೆ )

೧೧ ಸೀತಾಪತೇ ನಾಮನಸನಾ.........

೧೨ ಮಂಗಲಮಯ ನಾಮತುಜೆ ಸತತ ಗಾವುದ್ಯೆ

೧೩ ತಾಯಿ ಬಾರೆ ಮೊಗವ ತೋರೆ...........( ಗೋವಿಂದ ಪೈಯವರ ಭಾವ ಗೀತೆ )

೧೪ ಸ್ವಾಮಿ ದೇವನೇ ಲೋಕ ಪಾಲನೆ.........( ಪ್ರಾರ್ಥನಾ ಗೀತೆ )

೧೫ ವಿರಾಗ ಸನಾತನ ಶಾಂತನಿರಂಶ...........

೧೬ ಪಾದ ನೇತ್ರೆಯೊಳು ಜನಿಸಿದ ಶಿವನೆ........( ಸಂಪ್ರದಾಯದ ಹಾಡು )

೨೭ ಅನುರಾಗದಾ ಆರಾಧನಾ.............( ಚಲನಚಿತ್ರ ಗೀತೆ )

೨೮ ಜಯ ತೀರ್ಥಂಕರಾ...........

೨೯ ಭವ ವಿಜಯನೆತವನಾಮವ ನೆನೆದರೆ.......( ದಾಸರ ಕೀರ್ತನೆ )

೨೦ ಕಂಜದಳಾಕ್ಷಿಣಿ ಕಮಲಿನಿಗೆ.......

೨೧ ರಾತ್‌ಬರಕಾ ಹೈ ಮಹಿಮಾ ಅಂಧೇರಾ..........( ಹಿಂದಿ ಚಲನಚಿತ್ರ ಗೀತೆ )

೨೨ ಬಾನಮ್ಮ ಮನೆಗೊಮ್ಮೆ........( ದಾಸರ ಕೀರ್ತನೆ )

೨೩. ಶ್ರೀ ಪರಿಪಾಲಿಸು ದೀನಬಾಲರ....... ( ಪ್ರಾರ್ಥನಾ ಗೀತೆ )

೨೪ ತನು ನಿನ್ನದು ಜೀವನ ನಿನ್ನದು.........( ದಾಸರ ಕೀರ್ತನೆ )

೨೫ ನೆರೆ ಪೂಜಿಪೆ ನಿನ್ನಾ ಎಂಬಂತೆ....... ಈ ಎಲ್ಲಾ ಪ್ರಚಲಿತ ಪದ್ಯಗಳ ರಾಗದ ಧಾಟಿಯಲ್ಲಿ ಕವಯತ್ರಿ ರಾಧಮ್ಮ ಜಿನ ಸ್ತುತಿಗಳನ್ನು ರಚಿಸಿದ್ದಾರೆ.

" ಜಿನೇಶ್ವರ ಪೂಜಾಷ್ಟಕ "ದಲ್ಲಿ ಬರುವ ಅರಹಂತಪರಮೇಷ್ಟಿಗಳ ಪೂಜೆಯನ್ನು ಮಾಡುವ ಒಂದು ಪೂಜಾ ಪದ್ಯದ ವಿವರಣೆ. ಇದನ್ನು ಕವಯತ್ರಿ ಕಾಂಭೋಧಿ ರಾಗ ಮತ್ತು ಝುಂಪೆತಾಳದಲ್ಲಿ ರಚಿಸುವುದನ್ನು ಗಮನಿಸಬಹುದು. ರಚನೆಯ ಕಾಲದಲ್ಲಿ ಪ್ರಸಿದ್ಧವಾದ ( "ಖ್ಯಾತಿಬಾರದ ವಸ್ತು ಎಷ್ಟಿದ್ದರೇನು........ ಎಂಬಂತೆ |" ) ಈ ಪದ್ಯದಿಂದ ಪ್ರಭಾವಿತರಾಗಿ ಈ ಪೂಜಾ ಪದ್ಯವನ್ನು ಅದೇ ಧಾಟಿಯಲ್ಲಿ ರಚಿಸಿದ್ದಾರೆ.

ಶ್ರೀ ಮುಕ್ತಿಲೋಲ, ಜಿನ ಪಾಲಿಪುದು ನೀನು | ಮೇಲುಕೀಳರಿಯದಲೆ ಬಾಳು ಗೆಟ್ಟಿಹೆನು || ಪ ||

ಹಲವು ಪಾಪವನೆಸಗಿ, ಕಲಿಲಕೂಪದಿಸಿಲುಕಿ | ನೆಲೆಯ ಕಾಣದಲಿಹೆನು ಮಾರಹರ ಜಿನಪ ||

ಕಲಿಲಹರ ನಿನ್ನ ಪದಕಿಳಿಸುವೆನು ಜಲವ ಮಮ | ಕಲಿತಭವ ಮಲಿನಗಳ ತೊಳೆಯಯ್ಯಜಿನಪ ||ಜಲಂ||

ಈ ಪದ್ಯದಲ್ಲಿ ತಾನು ಹೇಗೆ ಮುಕ್ತಿ ಪದವನ್ನು ಪಡೆಯಬೇಕು ಎನ್ನುವುದನ್ನು ರೂಪಿಸಿದ್ದಾರೆ. ಐಹಿಕವಾದ ಸುಖಗಳೆಂಬ ಈ ಪ್ರಂಪಚದಲ್ಲಿ ತಿಳಿದೋ ತಿಳಿಯದೆಯೋ ಗೈದಂತಹ ದುಷ್ಕರ್ಮವನ್ನು ನಾಶಗೊಳಿಸಿ ಪಾಪ ವಿನಾಶನಾದ ನೀನು ನನ್ನಲ್ಲಿರುವ ಮಲಿನತೆಯನ್ನು ನಿನ್ನ ಅನುಗ್ರಹವೆಂಬ ಅಮೃತ ಸೇಚನದಿಂದ ತೊಳೆದು ಪಾವನಾಳನ್ನಾಗಿಸುವ ಮೂಲಕ ನಿನ್ನ ಪಾದ ಸಾಮ್ರಾಜ್ಯವನ್ನು ನೀಡು ಎಂಬ ಬೇಡಿಕೆಯನ್ನು ಜಲವನ್ನು ಅರ್ಪಿಸುವುದರ ಮೂಲಕ ಬೇಡಿಕೊಳ್ಳುತ್ತಾರೆ.

ಭವ ಶರಧಿಯಲಿ ಮುಳುಗಿ ಬಳಲುತಲಿ, ಮನಮರುಗಿ |
ತೊಳಲುತಿಹೆ ಸಲಹಯ್ಯ ಜಿನಪ ||
ಮಲಯಜಪನ್ನೀರಿಂದ, ಮಿಳಿತವಹನವಗಂಧ |
ಮನದೊಲವಿನಿಂದರ್ಚಿಸುವೆ ಪಾದ ದ್ವಂದ್ವ || ಗಂಧ ||

ಅದೇ ರೀತಿ ಗಂಧ ಅರ್ಪಿಸುವ ಮೂಲಕ ಜಿನೇಶ್ವರನಲ್ಲಿ ಹೀಗೆಂದು ಬೇಡುತ್ತಾರೆ. ಮೂರು ದಿನಗಳ ಭಾಗ್ಯವಾದ ಈ ಸಂಸಾರವೆಂಬ ಬಂಧನದಲ್ಲಿ ಸಿಲುಕಿದ್ದೇನೆ. ಈ ಸಂಸಾರ ಬಂಧನದಿಂದ ಪಾರು ಮಾಡುವವ ನೀನಲ್ಲದೆ ಅನ್ಯರಿಲ್ಲ. ಭವ ಸಾಗರದಲ್ಲಿ ಮುಳುಗುತ್ತೇಳುತ್ತಾ ದಡವನ್ನು ಸೇರುವುದಕ್ಕೆ ಯತ್ನಿಸುತ್ತಿದ್ದೇನೆಯೇ ಹೊರತು ಕಡೆ ಹಾಯಿಸುವವ ಅಪಾರ ಮಹಿಮ ನಿನಲ್ಲದೆ ಮತ್ತಾರು ಎಂದು ಎಲ್ಲವನ್ನು ಜಿನೇಶ್ವರನಿಗೆ ಒಪ್ಪಿಸುವ ಮೂಲಕ ಭಕ್ತಿಯ ಸೌಗಂಧವನ್ನು ಮೆರೆದಿದ್ದಾರೆ.

ಅಕ್ಷತೆಯನರ್ಪಿಸುವೆ ರಕ್ಷಿಸೆನ್ನುತ ನಿನಗೆ |
ಅಕ್ಷಯದ ಮೋಕ್ಷಕಧ್ಯಕ್ಷ ಜಿನಪ ||
ಇಕ್ಷುಚಾಪನ ಹರನೆ ಮುಕ್ತಿ ಲಕ್ಷ್ಮಿಯನೆನ್ನ |
ಪಕ್ಷಗೈವುತ ಸಲಹೊ ಯಕ್ಷನುತ ಜಿನಪ || ಅಕ್ಷತಂ ||

ಅಕ್ಷತೆಯನ್ನು ಅರ್ಪಿಸುವುದರ ಮೂಲಕ ಅಕ್ಷಯಾಶ್ರಿತನಾದ ಮೋಕ್ಷಾಧ್ಯಕ್ಷನಾದ ಜಿನನಾಥನಲ್ಲಿ ಹೀಗೆಂದು ಮೊರೆಯಿಡುತ್ತಾರೆ.ಮನಸ್ಸಿನಲ್ಲಿ ಜನಿಸದ ದುರ್ಭಾವನೆಗಳನ್ನು ನಾಶಗೊಳಿಸಿ ಯಾವ ರೀತಿ ಮನಸಿಜನಾದ

ಮನುಮಥನನ್ನು ನೀನು ದಹನಗೊಳಿಸಿದೆಯೋ ಅದರಂತೆ ನನ್ನಲ್ಲಿರುವ ಕೆಟ್ಟ ಭಾವಗಳನ್ನು ನಾಶಗೊಳಿಸಿ ಸದಾ ನಿನ್ನ ಸಾನಿಧ್ಯವನ್ನು ಅನುಗ್ರಹಿಸು ಎಂದು ಪ್ರಾರ್ಥಿಸುತ್ತಾರೆ.

ಪುಲ್ಲಬಾಣನ ಗೆಲ್ದ ಮಲ್ಲ ನಿನ್ನಯ ಪಾದ |
ಕೆಲ್ಲಲೋಕದೊಳಿರುವ ಚೆಲ್ವ ಕುಸುಮಗಳ ||
ಮೊಲ್ಲೆಗಳ ಮಲ್ಲಿಗೆಯ ಪಲ್ಲವಸುಮಾಲೆಗಳ |
ನಿಲ್ಲದರ್ಚಿಪೆನೀಯಾ ಎಲ್ಲ ಸುಲವೆನಗೆ || ಪುಷ್ಪಂ ||

ಕ್ಷುಧೆಯ ರೋಗ ವಿನಾಶ, ಅಘಹರನೆ ಜಗದೀಶ |
ಜಗದ ಕೋಟಲೆ ಬಿಸುಟ ಪಗಲರಸತೇಜ ||
ಹಗಲಿರುಳು ನಿನ್ನ ಪದಯುಗಲ ಕೊಂದಿಸಿ ನಾನು |
ಬಗೆಬಗೆಯ ಭಕ್ಷ್ಯಗಳನರ್ಚಿಸುವೆ ಶ್ರೀಶ || ಚರುಂ ||

ಪುಷ್ಪಶರನಾದ ಮನ್ಮಥನನ್ನು ಲಯಗೊಳಿಸಿದ ಹರನನ್ನು ಕುರಿತು ಸರ್ವ ಸೌಖ್ಯವನ್ನು ಬೇಡುವುದರೊಂದಿಗೆ ಪುಷ್ಪರ್ಚನೆಯನ್ನು ಮಾಡುತ್ತಾ ಕವಯತ್ರಿಯು ತನ್ನ ಭಕ್ತಿಯನ್ನು ಎಲ್ಲಾ ಲೋಕದ ಪುಷ್ಪಗಳಿಗೆ ಹೋಲಿಸಿ ಪಾದಕ್ಕೆ ಅರ್ಪಿಸುತ್ತಾಳೆ. ಸೂರ್ಯಸಮಾನ ತೇಜಸ್ವಿಯಾದ ಭಗವಂತನಿಗೆ ಚರುವನ್ನೂ ಅರ್ಪಿಸುವುದರ ಮೂಲಕ ಯಾವುದೇ ಕಷ್ಟ ಕೋಟಲೆಗಳನ್ನು ನಿವಾರಿಸಿ ನನ್ನನ್ನು ರಕ್ಷಿಸು ಎಂದು ಹಗಲಿರುಳು ಬೇಡುತ್ತಾಳೆ.

ಮಂದಮತಿಯೆಂಬ ತಮ - ದಂದವನು ಕಡೆಗಣಿಸಿ |
ಮಂದರರದಕ್ಷೀರವನು ಮಿಂದೆ ಜಿನಪ ||
ಕುಂದಣದ ಬಂಧುರದ ಸುಂದರರದಿದೀಪವನು |
ಅಂದದೊಳು ಬೆಳಗುವೆನು ಇಂದುಕಳೆ ಜಿನಪ || ದೀಪಂ ||

ಅಜ್ಞಾನವೆಂಬ ಅಂಧಾಕಾರಯುಕ್ತಳಾಗಿ ವಿಚಾರ ಶ್ಯೂನತೆಯಿಂದ ಇರುವ ನನ್ನ ಅಜ್ಞಾನವನ್ನು ಪರಿಹರಿಸಿ ಸುಜ್ಞಾನದ ಬೆಳಕನ್ನು ನೀಡು ಎಂದು ನಿವೇದಿಸಿಕೊಳ್ಳುತ್ತಾ. ಬಂಗಾರದ ವರ್ಣದಿಂದ ಹೊಳೆಯುವ ದೀಪವನ್ನು ಹೊತ್ತಿಸಿ ಆ ದೀಪದ ಬೆಳಕಿನಂತೆ ನನ್ನ ಅಜ್ಞಾನ ಕತ್ತಲನ್ನು ಹೋಗಲಾಡಿಸುವ ನಿನ್ನ ಕಾರುಣ್ಯವೆಂಬ ಬೆಳಕು ನನ್ನೆಡೆ ಹರಿಯಲಿ ಎಂದು ಪ್ರಾರ್ಥಿಸುತ್ತಾಳೆ.

ಕರ್ಪೂರ ಗಂಧಮಿ - ಶ್ರಿತ ಚಾರು ಧೂಪವನು |
ಭಕ್ತಿ ಪೂರ್ವಕ ನಿನಗೆ ಅರ್ಪಿಸುವೆ ಜಿನಪ |
ಪ್ರಥ್ವಿಯೊಳಗೆನ್ನ ಮನ - ದರ್ತಿಯನು ಸಲ್ಲಿಸುತಲಿ |
ನಿತ್ಯ ನಿರ್ಮಲ ಪೊರೆಯೂ ಶಕ್ತಿಯುತ ಜಿನಪ || ಧೂಪಂ ||

ಪ್ರಪಂಚದಲ್ಲಿ ಹುಟ್ಟಿ ಬಂದ ನಾನು ದೈವ ಭಕ್ತಳಾಗಿ ಸಚ್ಚರಿತತನವನ್ನು ನಡೆಸುತ್ತ ಆದರ್ಶಳಾಗಿ ಬದುಕುವುದಕ್ಕೆ ನಿನ್ನ ಕರುಣೆಯಿರಲಿ ಎಂದು ಪ್ರಾರ್ಥಿಸುತ್ತಾ ಧೂಪವನ್ನು ಅರ್ಪಿಸುತ್ತಾಳೆ.

ಉತ್ತುತ್ತೆ ದ್ರಾಕ್ಷೆಯನು ಕಿತ್ತಳೆಯು ಮೊದಲಾದ |
ಉತ್ತಮದ ಫಲಗಳನು ಒಪ್ಪಿಸುವೆ ನಿನಗೆ ||
ಮತ್ತೆನ್ನ ನಿನ್ನಂತೆ ಮಾಂಡೆದು ಕರಗಳನು |
ಎತ್ತಿ ಬೇಡುವೆ ಪೊರೆಯೂ ಮುಕ್ತಿಪಾಲಕನೆ || ಫಲಂ ||

ಜಲಗಂಧ ಅಕ್ಷತೆಯು ಸುರಭಿಚರುದೀವಿಗೆಯು |
ವರಧೂಪ ಫಲಗೂಡಿ ಹರುಷದೊಳು ನಿನಗೆ ||
ಸರಸದರ್ಘ್ಯವನೀವೆ ಭರದಿ ಕಾಡುವ ಕರ್ಮ |
ದಿರವನೆಲ್ಲವ ಕೆಡಿಸೊ ಪರಮಪಾವನನೆ || ಅರ್ಘ್ಯಂ||

ಫಲವನ್ನು ಪರಮಾತ್ಮನಿಗೆ ಅರ್ಪಿಸುವ ಮೂಲಕ ಸದಾ ಸತ್ಫಲವನ್ನೇ ನನಗೆ ಕರುಣಿಸು ಎಂದು ಬೇಡಿಕೊಳ್ಳುತ್ತಾ ಭಕ್ತಿಯ ಪಥದಿಂದ ಮಾನವನು ಮಾಧವನಾಗಬಹುದು ಎಂಬ ತನ್ನ ದೃಢ ನಂಬುಗೆಯನ್ನು ಪರಮಾತ್ಮನ ಪಾದ ಮೂಲದಲ್ಲಿರಿಸಿದ್ದಾಳೆ.

ವಿಮಲರೂಪನೆ ನಿನ್ನ ಅಮಲಪಾದದ್ವಯಕೆ |
ಭ್ರಮರಝೇಂಕೃತಮಾದ ಕಮಲ ಪುಷ್ಪ ಗಳ ||
ಸುಮನಾಂಜಲಿಯಗೈದು ನಮಿಸುವೆನು ಎನ್ನ ಬಹು |
ಮಮತೆಯಿಂದಲಿ ಪೊರೆಯೊ ಅಮರವರ ಪೂಜ || ಪುಷ್ಪಾಂಜಲಿ ||

ಮೇಲೆ ತಿಳಿಸಿದ ಸಕಲ ಸುವಸ್ತುಗಳು ನನ್ನ ಮಾನಸಿಕ ವಾಂಛೆಯ ಸಾಂಕೇತಿಕವಾದದ್ದು ಅವೆಲ್ಲವನ್ನೂ ಈ ಅರ್ಘ್ಯದೊಂದಿಗೆ ನಿನ್ನ ಪಾದಕ್ಕೆ ಸಮರ್ಪಿಸುವುದರ ಮೂಲಕ ಪೂರ್ವಾಜಿತ ಕರ್ಮಗಳೇನಿದ್ದರೂ ಅದನ್ನು

ಪರಿಹರಿಸಿ ಬರಬಹುದಾದ ದುರಿತಗಳನ್ನು ನಿವಾರಿಸಿ ನಿನ್ನ ಭಕ್ತ ಶಿರೋಮಣಿಯಾಗಿ ಬದುಕುವ ಅವಕಾಶವನ್ನು ಪ್ರಾರ್ಥಿಸು, ಎಂದು ಬೇಡಿಕೊಳ್ಳುತ್ತಾಳೆ.

ಅಂತಕವಿನಾಶ ಭಯಬ್ರಾಂತರಹಿತನೆ ನಿನ್ನ |
ಶಾಂತ ಸ್ವರೂಪ ಪದಾಕ್ರಾಂತನಾಗುತಲಿ ||
ಸಂತತ ಧರಾತಳಕೆ ಶಾಂತಿಯನು ನೀಯೆನುತ |
ಚಿಂತಿತಾರ್ಥವ ನೀವ ಶಾಂತಪದತಲಕೆ || ಶಾಂತಿಧಾರಾ ||

ಶಾಂತಿದಾರನನ್ನು ಸಂಸ್ತುತಿಸುತ ಅಂತಕವಿನಾಶನು ಘೋರ ದುರಿತ ಹರನು ಆದಂತಹ ನೀನು ಶಾಂತಸ್ವರೂಪಿಯಾಗಿ ವಿಶ್ವವೆಲ್ಲವೂ ಶಾಂತಿಯಿಂದ ವ್ಯವಹರಿಸುವಂತೆ ಅನುಗ್ರಹಿಸು ಎಂದು ಬೇಡುತ್ತಾಳೆ.

ಭಕ್ತ ವತ್ಸಲನಾದ ಕರುಣಾಕರನನ್ನು ಈ ರೀತಿ ಪ್ರಾರ್ಥಿಸುತ್ತಾಳೆ. ವಿಮಲರೂಪನೂ ನಿನ್ನ ಅಮಲಪಾದದ್ವಯಕ್ಕೆ ಸುಮನಸ್ಕಳಾದಂತಹ ನಾನು ಪರಿಪರಿಯ ಪುಷ್ಪಗಳನ್ನು ಅರ್ಪಿಸಿ ಅಂಜಲಿ ಬದ್ದಳಾಗಿ ನಿನ್ನ ಪ್ರಸಾದವೆಂಬ ಪುಷ್ಪವನ್ನು ಸ್ವೀಕರಿಸುವುದಕ್ಕಾಗಿ ಕಾಯುತ್ತಿದ್ದೇನೆ ಅಮರ ವಂದ್ಯನೆ ನಿನ್ನ ಮಮತೆಯೆಂಬ ಕೃಪಾ ಕಟಾಕ್ಷವು ನನ್ನ ಮೇಲಿರಲಿ. ಇದೇ ನಾನು ನಿನ್ನಲ್ಲಿ ಬೇಡುವ ಅನುಗ್ರಹ ಎಂದು ಬೇಡಿಕೊಳ್ಳುತ್ತಾಳೆ.

ಜಿನೇಶ್ವರನ ಭಕ್ತಿಗೀತೆಗಳು ಈ ಭಾಗದಲ್ಲಿ ಬರುವ ಚಿಕ್ಕದಾದರೂ ಆದರೆ ಬಹಳ ಸುಂದರವಾದ ಪದ್ಯ "ಬುತ್ತಿಯೇನು" ಎಂಬ ಪದ್ಯವನ್ನು ಉದಾಹರಣೆಯಾಗಿ ನೋಡಬಹುದು.

ಎಷ್ಟು ದೂರದಿ ಬಂದೆಯೊ ಇ |
ನ್ನೆಷ್ಟು ದೂರಕೆ ಪೋಗಲಿರುವೆಯೋ ||
ಕಟ್ಟಿಕೊಂಡಿಹೆ ಏನು ಬುತ್ತಿಯ |
ಬಟ್ಟೆಯೊಳಗಿಹ ಪಯಣಿಗಾ ? || ೧ ||

ಗೊತ್ತು ಗುರಿಯೊಂದಿಲ್ಲದಿರುವ |
ಪತನಕೆ ನೀ ಪೋಗಲಿರುವೆ |
ಬುತ್ತಿಯನು ಕೊಂಡೊಯ್ಯದಿದ್ದೊಡೆ |
ಮತ್ತೆ ಅಲ್ಲೇನುಣ್ಣುವೆ || ೨ ||

ಜ್ಞಾನಿಗಳ ಸಂಘದೊಳಗಿದ್ದು |
ಜ್ಞಾನವೆಂಬುವ ಸುಧೆಯನಾರ್ಜಿಸು ||
ದಾನವನು ಸತ್ಪಾತ್ರಕೀವುತ |
ಗಳಿಸು ಅಕ್ಷಯ ಫಲವನು || ೩ ||

ನೀಡಿ ಕರುಣದಿ ದಾನ ಉಪಕೃತಿ |
ಮಾಡಿ ದೀನಾ ನಾಥರನು ನೀ |
ನೋಡಿ ದಯದಿಂದುದ್ಧರಿಸಿಗಳಿ |
ಸದರ ದಿವ್ಯ ಫಲಂಗಳಂ || ४ ||

ಇಂತು ಫಲಗಳನಾರ್ಜಿಸುತಲಿ
ಸಂತಸದಲೀ ಕಟ್ಟಿ ಬುತ್ತಿಯ ||
ನಾಂತು ಶಿರದಲಿ ನಡೆದೆಯಾದೊಡೆ |
ಸುಖದೊಳುಣಬಹುದಲ್ಲಿ ನೀ || ೫ ||

ಸನಿಹಕೈದುವ ವೇಳೆಯಲ್ಲಿ |
ತೃಣಕೆ ಸರಿಗಂಡೆಲ್ಲವನು ನೀ |
ಮನವ ನಿನ್ನೊಳಗಿಟ್ಟು ಯಾತ್ರೆಯ |
ಕೊನೆಯ ಮುಟ್ಟೆಲೆ ಪಯಣಿಗ | || ೬ ||

ಜೀವನಯಾತ್ರೆಯ ಸತ್ಯವನ್ನು ಮತ್ತು ಸತ್ಫಲವನ್ನು ಕವಯತ್ರಿಯು ಈ ರೀತಿಯ ಆರ್ಜನೆಯಿಂದ ಪಡೆಯಬಹುದೆಂದು ಈ ಭಜನೆಯಿಂದ ತಿಳಿಸಿದ್ದಾರೆ. ಹುಟ್ಟು ಬದುಕು ಸಾವು ಎನ್ನುವುದು ಪ್ರತಿಯೊಂದು ಜೀವಿಯು ಅನುಭವಿಸುವ ಸಾಮಾನ್ಯ ಅವಸ್ಥೆಗಳು ಹುಟ್ಟುವ ಹಾಗೂ ಸಾಯುವ ಮಧ್ಯದ ಸುಧೀರ್ಘ ಅವಧಿಯೇ ಜೀವನ ಯಾತ್ರೆ ಎಂದು ಕರೆದಿದ್ದಾರೆ. ಪ್ರತಿಯೊಬ್ಬನು ಜೀವನ ಪಥದಲ್ಲಿ ಪಥಿಸುವಾಗ ಪೂರ್ವಜನ್ಮದ ಕರ್ಮ ಫಲಕ್ಕನುಸಾರವಾಗಿ ಸುಖವನ್ನು ದುಃಖವನ್ನು ಅನುಭವಿಸುತ್ತಾನೆ. ಇದು ಮುಂದೆ ಮುಂದಿನ ಜನ್ಮದಲ್ಲಿ ನಾವು ಸೌಖ್ಯವನ್ನು ಹೊಂದಬೇಕಾದರೆ ಈ ಜನ್ಮದಲ್ಲಿ ಯಾವ ರೀತಿ ಬದುಕಬೇಕು ಎನ್ನುವುದನ್ನು ಅನುಭವದ ಮೂಲಕ ಭೋದಿಸುತ್ತದೆ. ಆದುದರಿಂದ ದೀರ್ಘಾವಧಿಯ ಈ ಜೀವನಯಾತ್ರೆಯ ಪಯಣಿಗಾ ತಾನು ಮುಂದೆ ತಂಗುವ ಪ್ರದೇಶದಲ್ಲಿ ಉಣ್ಣುವುದಕ್ಕಾಗಿ ಬುತ್ತಿಯನ್ನು ಕಟ್ಟಿಕೊಂಡೇ ನಡೆಯಬೇಕು ಎಂಬ ಸಂದರ್ಭದೊಂದಿಗೇ ಆಚಾರ

ವಿಚಾರ ,ಪಾಪ ಪುಣ್ಯಗಳೆಂಬುವುದನ್ನು ಸೂಚ್ಯವಾಗಿ ವಿವರಿಸಿದ್ದಾರೆ. ಮುಂದೆ ದುರ್ಗಮ ಪ್ರದೇಶವೆಂದರೆ ಅಲ್ಲಿ ನೀನು ಉಣ್ಣುವುದಕ್ಕಾಗಿ ಬುತ್ತಿಯನ್ನು ಕೊಂಡೊಯ್ಯಬೇಕು ಎನ್ನುವುದರ ಅರ್ಥ ಈ ಜನ್ಮದಲ್ಲಿ ಸತ್ಕರ್ಮ ವನ್ನೆ ಮಾಡಿದ್ದಲ್ಲಿ ಮುಂದೆ ನಿನ್ನ ಪಾಲಿಗೆ ಸಕಲ ಸೌಭಾಗ್ಯವೂ ಕೂಡಿಬರುತ್ತದೆ ಎಂದಾಗಿದೆ. ಜ್ಞಾನಿಗಳ ಒಡನಾಟದಲ್ಲಿ ಸುಜ್ಞಾನವನ್ನು ಪಡೆದು ದೀನ ದಯಾಪರನಾಗಿ , ದೈವ ಭಕ್ತಿಯುಳ್ಳವನಾಗಿ ನೀನು ಈ ಜೀವನ ಪಥದಲ್ಲಿ ನಡೆದೆಯಾದರೆ ಆ ಜೀವನ ಯಾತ್ರೆಯ ಕೊನೆಯನ್ನು ನೀ ತಲುಪುವೆ. ಅಲ್ಲಿ ನೀನು ಶಾಶ್ವತ ಸೌಖ್ಯವನ್ನು ಅನುಭವಿಸಲು ಇಲ್ಲಿ ನೀನು ಗೈದ ಈ ಪುಣ್ಯಕಾರ್ಯವೇ ಸಮೃದ್ಧವಾಗಿರುವ ಬುತ್ತಿಯಾಗಿರುತ್ತದೆ. ಆ ಬುತ್ತಿಗೆ ಯಾವುದೇ ಐಶ್ವರ್ಯಗಳು ಅರಸಿ ಬಂದಾಗಲೂ ನೀನು ತಿರಸ್ಕರಿಸುವೆ ಕಾರಣ ನೀನೆ ಆರ್ಜಿಸಿದ ಪುಣ್ಯದ ಇದಿರು ಅವೆಲ್ಲವೂ ನಿನ್ನ ಪಾಲಿಗೆ ಕೇವಲ ತೃಣ ಸಮಾನವಾಗಿರುತ್ತದೆ ಎಂದು ಉಪದೇಶಿಸುವ ಮೂಲಕ ಪ್ರಾಪಂಚಿಕರಿಗೆ ಈ ರೀತಿಯಾಗಿ ಭೋಧನೆಯನ್ನು ನೀಡಿದ್ದಾರೆ.

**5.1.6 - ಷಡ್ಗುಚ್ಛ :-** ಜೈನ ಮಹಿಳೆ ಬರೆದಿರುವ ' ಷಡ್ಗುಚ್ಛ' ಎಂಬುದು ಪ್ರಕಾಶನಗೊಳ್ಳದಿರುವ ಕೃತಿ. ಇದನ್ನು ಕನ್ನಡದ ವಿವಿಧ ಛಂದಸ್ಸುಗಳ ಬಳಕೆಯಿಂದ ಬರೆಯಲಾಗಿದೆ. " ಹಿಂದಿ ಭಾಷೆಯಲ್ಲಿರುವ ಪಂಡಿತ ದೌಲತರಾಮರ ' ಛಹಡಾಲ ' ಎಂಬ ಕೃತಿಯೇ ಇದಕ್ಕೆ ಆಧಾರ ಗ್ರಂಥವಾಗಿದ್ದಂತೆ ಕಂಡು ಬರುತ್ತದೆ. ಈ ಕೃತಿಯ ಸ್ವಲ್ಪ ಭಾಗ ಕವಯತ್ರಿಯ ಸ್ವಹಸ್ತಾಕ್ಷರದಲ್ಲಿ ಬರೆದ ಒಂದು ಅತಿ ಜೀರ್ಣವಾದ ಪುಸ್ತಕದಲ್ಲಿ ಲಭ್ಯವಾಯಿತು. ಇದೊಂದು ನೀತಿಯನ್ನು ಬೋಧಿಸುವ ಕೃತಿ. ಇಲ್ಲಿ ಒಂದನೇ ಗುಚ್ಛವು ೨೪ ಕಂದ ಪದ್ಯಗಳಲ್ಲಿಯೂ, ೨ನೇ ಗುಚ್ಛ ೧೨ ಕಂದಗಳಲ್ಲಿಯೂ ೩ನೇ ಗುಚ್ಛ ವಿವಿಧ ಸಂಸ್ಕೃತ ಛಂದಸ್ಸಿನ ೩೭ ವೃತ್ತಗಳಲ್ಲಿಯೂ, ೪ನೇ ಗುಚ್ಛ ೩೧ ಷಟ್ಪದಿಗಳಲ್ಲಿಯೂ, ೫ನೇ ಗುಚ್ಛ " ವೀರ ಚೌಪದಿ" ಗಳಲ್ಲಿಯೂ ೬ನೇ ಗುಚ್ಛ ೪೫ ಸಾಂಗತ್ಯ ಪದ್ಯಗಳಲ್ಲಿಯೂ ವಿವರಿಸಲ್ಪಟ್ಟಿದೆ. ಅವುಗಳ ಪೈಕಿ ಸರಳವಾದ ಒಂದು ರಚನೆ ಈ ರೀತಿ ಇದೆ.

ಆತ್ಮನು "ತೋರೆಯುತ್ತೆಂಟು ಮದಂಗಳಂ ತೊರೆದು ಶಂಕಾದ್ಯಾಷ್ಟ ದೋಷಂಗಳಂ | ತೊರೆದಾನಾಯತನಂಗಳಾರ ತೊರೆದುಂ ಮೂಢತ್ರದಿಂಗಳೆಂದಿರುವೀ ದೋಷಗಳೆಲ್ಲವಂ ವೆರೆಸುತಿಪ್ಪತ್ತೆದಮಂ ಪ್ರಾಜ್ಞರಾದದಿಂ ‖ ಯೋಗ್ಯ ಗುಣಗಳೆಂಟ ಪಿಡಿದಾಸಂ ವೇಗತಂ ತಾಳಲೀ ‖

ಕವಯತ್ರಿಯ ಇತರ ಕೃತಿಗಳಲ್ಲಿ ಕಂಡು ಬರುವಂತೆ ಇಲ್ಲಿಯೂ ನಿರರ್ಗಳತೆ, ಲಾಲಿತ್ಯ, ವಸ್ತುವಿನ ನೇರ ಹಾಗೂ ಸ್ಪಷ್ಟ ಕಥನವು ಕಂಡು ಬರುತ್ತದೆ. ಅದರಂತೆ ಕವಯತ್ರಿಯ ಸ್ವಂತಿಕೆಯೂ ಇಲ್ಲಿ ಕಂಗೊಳಿಸುತ್ತದೆ [೧೨]".

ಈ ಮಾತುಗಳನ್ನು, ಷಡ್ಗುಚ್ಛ ಕೃತಿಯ ಬಗೆಯ ವಿವರಗಳು ವೈ. ಉಮಾನಾಥ ಶೆಣೈ ಹೇಳಿರುವವುದು. ಈ ಕೃತಿಯ ಕುರಿತು ಇಷ್ಟು ವಿವರವಾದ ಮಾಹಿತಿ ಎಲ್ಲಿಯೂ ದೊರಕಿಲ್ಲ. ಈ ಕೃತಿಯು ಪ್ರಕಟಗೊಂಡಿಲ್ಲ.

**5.1.7 - ವರ್ಧಮಾನ ಚರಿತೆ :-** ರಾಧಮ್ಮನವರ ಸ್ವತಂತ್ರವಾದ ಪ್ರೌಢ ಕೃತಿಯಾಗಿದೆ. ತೀರ್ಥಂಕರಮಹಾವೀರರ ಜೀವನ, ಉಪದೇಶಗಳನ್ನು ವಿವರಿಸುವುದು ಈ ಕೃತಿ. ಕನ್ನಡ ಸಾಹಿತ್ಯದಲ್ಲಿ ಅಗದರಲ್ಲೂ ಹಳಗನ್ನಡ ಸಾಹಿತ್ಯವು ಕ್ರಿ.ಶ ೯ ನೇ ಶತಮಾನದಿಂದ ಆರಂಭಿಸಿ ೧೩ ನೇ ಅಂತ್ಯದವರೆಗೂ ಕಾಣಸಿಗುತ್ತದೆ. ಹಳೆಗನ್ನಡದಲ್ಲಿ ಜೈನ

ಕವಿಗಳೇ ಚಂಪೂ ಕಾವ್ಯಗಳನ್ನು ರಚಿಸಿದ್ದಾರೆ. ಇವರು ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪರಿಣಿತರಾಗಿರುತ್ತಿದರಿಂದ ಅವರುಗಳು ರಚಿಸಿದ ಕಾವ್ಯಗಳಲ್ಲಿ ಸಂಸ್ಕೃತ ಮತ್ತು ಪ್ರಾಕೃತಗಳಲ್ಲಿನ ಹಲವಾರು ಶಬ್ದಗಳು ಮೂಲ ಸ್ವರೂಪದಿಂದಲೇ ಅಥವಾ ಅಪಭ್ರಂಶ ಸ್ವರೂಪದಿಂದಲೇ ಕಾವ್ಯಗಳಲ್ಲಿ ಸೇರಿಹೋಗಿದೆ.

ಭಗವಾನ್ ವರ್ಧಮಾನ ಸ್ವಾಮಿಯ ಪುರಾಣವನ್ನು ಕುರಿತು ಕನ್ನಡ ಸಾಹಿತ್ಯದಲ್ಲಿ ಹಲವು ಕಾವ್ಯಗಳು ರಚಿತವಾಗಿದೆ. ಅವುಗಳನ್ನು ಚಾವುಂಡರಾಯ ವಿರಚಿತ (ಕ್ರಿ. ಶ ೯೭೮ ) ಚಾವುಂಡರಾಯ ಪುರಾಣ, ಆಚ್ಚಣ್ಣ ವಿರಚಿತ (೧೧೯೫) ವರ್ಧಮಾನ ಪುರಾಣ, ಜಿನಸೇನ ವೃತಿ ವಿರಚಿತ ವರ್ಧಮಾನ ಪುರಾಣ, ೧೬ನೆ ಶತಮಾನ ಪದ್ಮ ಕವಿವಿರಚಿತ ವರ್ಧಮಾನಚರಿತೆ ( ೧೫೩೮ ), ಮಹಾವೀರ ಸ್ವಾಮೀಯವರ ಧರ್ಮೋಪದೇಶ - ಎಂ.ಜಗತ್ಪಾಲಯ್ಯ - ೧೯೭೫ ಮೊದಲಾದವುಗಳು ಅಂತೆಯೆ ಕಾಣಸಿಗದೆ ಇನ್ನೆಷ್ಟೋ ಕೃತಿಗಳಿವೆಯೇ ತಿಳಿಯುವುದಿಲ್ಲ.

ಸಾಂಗತ್ಯ ಛಂದಸ್ಸಿನಲ್ಲಿ ಕಾವ್ಯವನ್ನು ರಚಿಸಿದ ಕೆಲವೇ ಮಹಿಳೆಯರ ಕೃತಿಗಳ ಉಲ್ಲೇಖವನ್ನು ಈ ಕೆಳಗೆ ಪಟ್ಟಿ ಮಾಡಲಾಗಿದೆ.

ಹದಿಬದೆಯ ಧರ್ಮ - ಸಂಚಿ ಹೊನ್ನಮ್ಮ

ಉದ್ಧಾಳಿಕನ ಕತೆ, ಹೆಳವನಕಟ್ಟೆ. ಗಿರಿಯಮ್ಮ - ೧೭೫೦

ಚಂದ್ರಹಾಸನ ಕತೆ ಹೆ. ಗಿರಿಯಮ್ಮ - ೧೭೫೦

ಪದ್ಮಿನೀ ಕಲ್ಯಾಣ - ಶೃಂಗಾರಮ್ಮ - ೧೬೮೫ *

ವರನಂದೀ ಕಲ್ಯಾಣ - ಚೆಲುವಾಂಬೆ ೧೭೭೫ ^

ನಟರಾಜ ಭಕ್ತ ನೆಂದ ಹೊಲೆಯ - ಶಾರದಮ್ಮ

( ಸಂ) ಬಿ. ಶ್ರೀನಿವಾಸ ಅಯ್ಯಂಗಾರ್

ಪ್ರಸ್ತುತ ಕಾವ್ಯವಾದ ' ಶ್ರೀ ವರ್ಧಮಾನ ಚರಿತೆ' ಯು ಸಾಂಗತ್ಯ ಛಂದಸ್ಸಿನಲ್ಲಿ ರಚನೆಯಾಗಿದೆ. " ಪ್ರತಿಭಾನಂ ಕಾವ್ಯವಿದ್ಯಾ ಪ್ರಚಯ ಪರಿಚಯಂ ವೃದ್ಧ ಸೇವಾನು ರಾಗಂ ಸತತಾಭ್ಯಾಸ ಪ್ರಯತ್ನಂ ಕವಿತೆಗೆ ನಿಯತಂ ಕಾರಣಂ" . ಎಂಬ ನಾಗವರ್ಮ ಕವಿವಾಣಿಯಂತೆ ಒಂದು ಕಾವ್ಯವು ರಚನೆಯಾಗಬೇಕಾದರೆ ಪ್ರತಿಭೆ, ಪ್ರಾಚೀನ ಕಾವ್ಯಗಳ ಪರಿಚಯ, ಗುರು ಹಿರಿಯರಲ್ಲಿ ವಿನಯ ಮತ್ತು ಅವರನ್ನು ಸೇವಿಸುವ ಮನೋಭಾವ ಮತ್ತು ನಿರಂತರ ಅಭ್ಯಾಸ ಮಾಡುತ್ತಿರುವುದು ಈ ಗುಣಗಳು ಅತ್ಯಾವಶ್ಯಕ .

---

* ಶೃಂಗಾರಮ್ಮ - ಮೈಸೂರು ಚಿಕ್ಕದೇವರಾಜ ಒಡೆಯರ ಆಶ್ರಯದಲ್ಲಿದ್ದಾಗ. ಪದ್ಮಿನೀ ಕಲ್ಯಾಣ ೧೮೬ ಪದ್ಯಗಳ ಕೃತಿ. ಶ್ರೀನಿವಾಸ - ಪದ್ಮಾವತಿಯರ ಕಲ್ಯಾಣ ಇವರ ವಸ್ತು, ಭಕ್ತಿಶ್ರಾವ್ಯ ಕೃತಿ ರಚಿಸಿದರು.

^ ವರನಂದೀ ಕಲ್ಯಾಣ ೭ ಸಂಧಿಗಳ ಕಾವ್ಯ- ದಿಲ್ಲಿಯ ಬಾದಶಹಾನ ಮಗಳಾದ ವರನಂದಿ ಮತ್ತು ಮೇಲುಕೋಟೆ ಚೆಲುವರಾಯ ಸ್ವಾಮಿಗೆ ನಡೆದ ವಿವಾಹದ ವರ್ಣನೆ.

ರಾಧಮತಿಯವರು ಎಲ್ಲರಿಗೂ ಅರ್ಥವಾಗುವಂತೆ ಸರಳ ಶೈಲಿಯಲ್ಲಿ ಸುಲಭವಾಗಿ ಗ್ರಹಿಸುವಂತೆ ಕಾವ್ಯವನ್ನು ಆರಂಭಿಸಿದ್ದಾರೆ. ಉಪಮಾ, ಉತ್ಪ್ರೇಕ್ಷೆ, ಶ್ಲೇಷಾ ರೂಪಕ ಮೊದಲಾದ ಅಲಂಕಾರಗಳನ್ನು ಬಳಸಿ ಕಾವ್ಯ ರಚಿಸಿದ್ದಾರೆ. ಸಂಧರ್ಭಕ್ಕನುಗುಣವಾಗಿ ಇವುಗಳನ್ನು ಬಳಸಲಾಗಿದೆ. ಈ ಕೃತಿಯಲ್ಲಿ ಪುರಾಣ ಪ್ರಸಂಗಗಳ ಜೊತೆಗೆ ಐತಿಹಾಸಿಕ ವಿಷಯಗಳೂ ಹೇಳಲಾಗಿದೆ. ಮಹಾವೀರ ಸ್ವಾಮೀಯು ಸಂಪೂರ್ಣವಾಗಿ ಐತಿಹಾಸಿಕ ವ್ಯಕ್ತಿಯಾಗಿದ್ದು ಶಿಥಿಲಗೊಳ್ಳುತ್ತಿದ್ದ ಸದ್ಧರ್ಮದ ಪುನರುತ್ಥಾನಕ್ಕೆ ಶ್ರಮಿಸಿ ಲೋಕೋತ್ತರ ನಾಯಕರಾದವರು. ಆದ್ದರಿಂದ ಅವರ ಜೀವನ ವೃತ್ತಾಂತದಲ್ಲಿ ಧಾರ್ಮಿಕ ಪುನರುತ್ಥಾನ ಪ್ರಸಂಗಗಳ ಜೊತೆಗೆ ಐತಿಹಾಸಿಕ ಘಟನಾವಳಿಗಳೂ ಬಂದಿರುವುದನ್ನು ಗಮನಿಸಬಹುದು.

ಸಾಮಾನ್ಯವಾಗಿ ಸತ್ಪುರುಷರ ಮತ್ತು ಸಜ್ಜನರ ಸಹವಾಸದಿಂದ ಮನುಷ್ಯರಲ್ಲಿ ಸದ್ಗುಣ ಸೌಜನ್ಯಗಳುಂಟಾಗುತ್ತವೆ. ಮನುಷ್ಯನು ತನ್ನ ಆತ್ಮಿಕ ಸುಗುಣಗಳ ಸುಧಾರಣೆಗಾಗಿ ಸತ್ಪುರುಷರ ಮತ್ತು ಸಜ್ಜನರ ಸಹವಾಸ ಮಾಡುವುದಾಗಿದೆ. ಇದೇ ರೀತಿ ಪರೋಕ್ಷವಾದ ಮಹಾಪುರುಷರ ಚರಿತ ಪುರಾಣಗಳನ್ನು ತಿಳಿಯುವುದು ಶ್ರವಣ ಮಾಡುವುದು ಕೂಡ ಆತ್ಮಿಕ ಸದ್ಗುಣಗಳ ಸುಧಾರಣೆಗಾಗಿಯೇ ಹೌದು. ಮಹಾಪುರುಷರಲ್ಲಿ ಅನುಪಮ ಪುಣ್ಯ ಮೂರ್ತಿಗಳಾದ ತೀರ್ಥಂಕರರುಗಳಿಗಿಂತ ಶ್ರೇಷ್ಠರಾದ ಮಹಾ ಪುರುಷರಿಲ್ಲವೆಂದು ಜೈನ ಬಂಧುಗಳ ನಂಬಿಕೆ ಮೇಲೆ ಹೇಳಿದ ೨೪ ತೀರ್ಥಂಕರರರುಗಳಲ್ಲಿ ವರ್ಧಮಾನರು ಇಪ್ಪತ್ತು ನಾಲ್ಕನೆಯವರು ಈ ತೀರ್ಥಂಕರೆಲ್ಲರೂ ಸಮಾನರಾದುದರಿಂದ ಪವಿತ್ರಾತ್ಮರೂ, ಪೂಜ್ಯರೂ, ಆಗಿರುತ್ತಾರೆ ವರ್ಧಮಾನ ತೀರ್ಥಂಕರರು ಕೊನೆಯವರು.

ವರ್ಧಮಾನರು ತೀರ್ಥಂಕರರ ಸ್ಥಾನವನ್ನು ತಲುಪಬೇಕಾಗಿದ್ದರೆ ಜನ್ಮ ಜನ್ಮಾಂತರಗಳನ್ನು ಎಷ್ಟು ಏರಿಳಿಯಬೇಕಾಯಿತೋ ತಿಳಿಯದು. ಹೀಗೆ ಅನೇಕ ಭವಾಂತರಗಳನ್ನು ಕಳೆದನಂತರ ಮಾನವನಾಗಿ ಜನಿಸಿ, ಯೋಗ್ಯವಾದ ಆಧಾತ್ಮಿಕ ಸಾಧನಾಭೂಮಿಕೆ ಒದಗಿ ಬಂದು, ತಮ್ಮ ಕಾಲ ಮೇಲೆ ತಾವು ನಿಂತು, ಬಹು ಎಚ್ಚರಿಕೆಯಿಂದ ಸಾಧನೆ ಮಾಡುತ್ತಾ ಭವಭವಗಳಲ್ಲಿ ಉನ್ನತಮಟ್ಟಕ್ಕೆ ಏರುತ್ತಾ, ಕೊನೆಗೆ ಅಂತಿಮ ಗುರಿಯಾದ ಮೋಕ್ಷ ನಗರವನ್ನು ಸೇರಿಕೊಂಡರು. ಆದರೆ ಅದನ್ನು ಸೇರುವ ಅವರ ಮುಂದೆ ಎರಡು ಕರ್ತವ್ಯಗಳಿದ್ದುವು. ಮೊದಲನೆಯದು ಜಗತ್ಕಲ್ಯಾಣವನ್ನು ಮಾಡುವುದಾದರೆ, ಎರಡನೆಯದು ಆತ್ಮ ಕಲ್ಯಾಣ ಮಾಡಿಕೊಳ್ಳುವುದಾಗಿತ್ತು. ಹೀಗೆ ಸಾಧನಾ ಮಾರ್ಗದಲ್ಲಿ ಮುಂದುವರಿಯುತ್ತಾ ಪರಮೋಚ್ಚ ಸ್ಥಿತಿಗೆ ತಲುಪಿದಾಗ, ಅವರಿಗೆ ಮಹಾವೀರ ತೀರ್ಥಂಕರರ ಪರಮ ಪವಿತ್ರತರ ಜನ್ಮವು ಒದಗಿಬಂದಿತು. ಅದು ಭವಭವಾಂತರಗಳ ಸಾಧನೆಯಿಂದ ಕ್ರಮಕ್ರಮವಾಗಿ ಕರ್ಮಗಳನ್ನು ನಷ್ಟಪಡಿಸಿಕೊಂಡದ್ದರಿಂದ ಪ್ರಾಪ್ತವಾಗಿತ್ತು. ಇದಕ್ಕಾಗಿ ಆ ಮಹಾತ್ಮರು ಅಗಣಿತ ಉಚ್ಚಸ್ತರೀಯ ನೈತಿಕ ಭೂಮಿಕೆಯನ್ನು ಪಡೆಯಲು ಅನವರತ ಆಧಾತ್ಮಿಕ ಪ್ರಯಾಸದ ಸಾಧನೆ ಮಾಡಿದ್ದರೆಂಬುದು ಊಹೆಗೆ ಎಟುಕದ ವಿಷಯ. ಯಾವ ಆತ್ಮನಿಗೇ ಆಗಲಿ ಹಿಂದಿನ ಜನ್ಮ ಪರಂಪರೆಗೆ ಮೊದಲನೆಯದು ಯಾವುದು ಎಂಬುದು ಗೊತ್ತಾಗುವುದಿಲ್ಲ. ಅದು ಅವಧಿಜ್ಞಾನ ಸಂಪನ್ನರಿಗೆ ಮಾತ್ರ ತಿಳಿಯಲು ಸಾಧ್ಯ . ಆದ್ದರಿಂದ ವರ್ಧಮಾನ ಸ್ವಾಮಿಗ ಯಾವ ಭವದಿಂದ ಜೀವನದ ದೃಷ್ಟಿಯಲ್ಲಿ ಸಾಧರಣ ಪರಿವರ್ತನೆಯಾಗ ತೊಡಗಿತೋ, ಆ ಭವದಿಂದ ಇತರ ಭವಗಳ ಶೃಂಖಲೆಯಸ್ನು ತೆಗೆದು ಕೊಳ್ಳಲಾಗಿದೆ. ಜೈನ ಪುರಾಣ ಕರ್ತೃಗಳು ಈ ವಿಧಾನವನ್ನೆ ಅನುಸರಿಸಿದ್ದಾರೆ. ತದನುಸಾರವಾಗಿ ಪ್ರಸ್ತುತ ಕೃತಿ 'ವರ್ಧಮಾನ ಚರಿತೆ' ಯಲ್ಲಿ ಪುರೂರವನೆಂಬ ಬೇಡನ ಭವದಿಂದ ಮೊದಲಾಗಿ ಸಂಪ್ರದಾಯಕ್ಕನುಗುಣವಾಗಿ ಪುರೂರವನ ಭವಕ್ಕಿಂತ ಹಿಂದೆ ಅನೇಕ ಜನ್ಮಗಳಿದ್ದರೂ ಸಾಗರದತ್ತ ಮುನಿಗಳ

ಉಪದೇಶದಿಂದ ಮಧು ಮಾಂಸಾದಿಗಳನ್ನು ವರ್ಜಿಸಿದ ವ್ರತವನ್ನು ಪಾಲಿಸಿ, ಊರ್ಧ್ವ ಲೋಕವಾದ ಸ್ವರ್ಗಕ್ಕೆ ಹೋದದ್ದು ಮೋಕ್ಷ ಮಾರ್ಗದಲ್ಲಿಟ್ಟ ಮೊದಲ ಸೋಪಾನವಾಗಿದೆ.

ಜೈನ ಧರ್ಮದ ಸಾರ :- " ಜೀವನು ಜೈತನ್ಯ ಸ್ವರೂಪದವನು ಅನಂತಜ್ಞಾನ, ಅನಂತ ದರ್ಶನ, ಅನಂತವೀರ್ಯ, ಅನಂತ ಸುಖಗಳಿಂದ ಕೂಡಿರುವುದು ಜೀವನ ಸ್ವಭಾವ. ಈ ಜೀವನು ಅಜೀವದೊಡನೆ ಸೇರಿಕೊಂಡು ಕರ್ಮದ ಕಟ್ಟಿನಲ್ಲಿ ಸಿಕ್ಕಿ ಸಹಜವಾಗಿ ಅವನಲ್ಲಿರುವ ಅನಂತಜ್ಞಾನಾದಿಗಳ ಮೇಲೆ ಒಂದು ಆವರಣ ಕಂಡುಕೊಳ್ಳುತ್ತಾನೆ. ಆಗ ಜೀವನು ತನ್ನ ನಿಜಸ್ವರೂಪವನ್ನು ತಿಳಿಯದೆಚತುರ್ಗತಿರೂಪದಿಂದ ಸಂಸಾರದಲ್ಲಿ ತೊಳಲುತ್ತಾನೆ. ಶುಭಾಶುಭ ಕರ್ಮಗಳನ್ನು ಮಾಡಿ ಮನುಷ್ಯನಾಗಿ,ದೇವತೆಯಾಗಿ, ತಿರ್ಯಕ್ ಪ್ರಾಣಿಯಾಗಿ, ನಾರಕಿಯಾಗಿ ಮತ್ತೆ ಮತ್ತೆ ಹುಟ್ಟುತ್ತಲೇ ಇರುತ್ತಾನೆ. ಹೀಗೆ ಹುಟ್ಟು ಸಾವುಗಳ ಚಕ್ರದಲ್ಲಿ ಸುತ್ತುತ್ತಾ ವಿದ್ಯಾಜ್ಞಾನ, ಮೋಹಾದಿಗಳಿಂದ ಕರ್ಮದ ಕಟ್ಟನ್ನು ಗಟ್ಟಿಗೊಳಿಸುತ್ತಾ ಸಂಸಾರದಲ್ಲಿ ಸಿಕ್ಕಿ ತೊಳಲುತ್ತಿರುವಾಗ ಹಲವು ಪುಣ್ಯ ಕರ್ಮಗಳ ಬಲದಿಂದ ಕ್ರಮ ಕ್ರಮವಾಗಿ ಸಂಸಾರದ ತೊಡಕುಗಳನ್ನು ಬಿಡಿಸಿಕೊಳ್ಳಬೇಕೆಂಬ ಬಯಕೆಯುಂಟಾಗುತ್ತದೆ. ಅಭವ ಜೀವರಿಗೆ ಕಾಲಲಬ್ಧಿ ದೊರೆತಾಗ ಅಂದರೆ ಪಕ್ವಕಾಲ ಬಂದಾಗ, ಅವರು ಸಮ್ಯಗ್ದರ್ಶನ , ಸಮ್ಯಕ್ ಜ್ಞಾನ ಮತ್ತು ಸಮ್ಯಕ್ಚಾರಿತ್ರ ರೂಪವಾದ ರತ್ನತ್ರಯ ಧರ್ಮವನ್ನು ಆಶ್ರಯಿಸಿದರೆ, ತತ್ವಸ್ವರೂಪವು ಚೆನ್ನಾಗಿ ಗೊತ್ತಾಗುತ್ತದೆ. ಅನಂತರ ಜೀವನು ತನ್ನನ್ನೂ ತಾನರಿತು ಸಂಸಾರದಲ್ಲಿ ಬಂಧಿಸುವ ಕರ್ಮಗಳನ್ನು, ಬಂಧವಾಗಲು ಅವಕಾಶ ಕೊಡದೆ, ಮೊದಲು ಬಂಧವಾಗಿ ಮೈಗೂಡಿಸಿಕೊಂಡ ಕರ್ಮವನ್ನು ತಪಸ್ಸಿನಿಂದ ನಿಶ್ಶೇಷವಾಗಿ ನಾಶಪಡಿಸಿ, ಸಂಸಾರದ ಬಲೆಯಿಂದ ಬಿಡಿಸಿಕೊಂಡು ಬೇರೆಯಾಗುತ್ತಾನೆ. ಹೀಗೆ ಕರ್ಮಬಂಧನವಾದ ಬಿಡುಗಡೆ ಹೊಂದಿದ ಆತ್ಮನು ತನ್ನ ಸಹಜರೂಪವನ್ನು ಪಡೆದು, ಅನಂತಜ್ಞಾನಾದಿಗಳಿಂದ ಬೆಳಗುತ್ತಾ ಶಾಶ್ವತವಾದ ಮೋಕ್ಷ ಸುಖದಿಂದ ಲೋಕಗ್ರದಲ್ಲಿ ನೆಲೆಗೊಂಡು ಮುಕ್ತಾತ್ಮನೆನಿಸುತ್ತಾನೆ.

ಜೈನ ಧರ್ಮದ ಸಪ್ತ ತತ್ವಗಳು ಅಂದರೆ ಜೀವ, ಅಜೀವ, ಆಸ್ರವ, ಬಂಧ, ಸಂವರಾ, ನಿರ್ಜರಾ ಮತ್ತು ಮೋಕ್ಷ. ಈ ಏಳರ ಜೊತೆಗೆ ಪುಣ್ಯ ಮತ್ತು ಪಾಪಗಳೆಂಬೆರಡನ್ನು ಸೇರಿಸಿದರೆ ಒಟ್ಟು ತತ್ವಗಳು ಒಂಬತ್ತು ಅವುಗಳನ್ನು ನವ ಪದಾರ್ಥಗಳು ಎಂದು ಹೇಳುತ್ತಾರೆ. ಜೀವ, ಧರ್ಮ, ಅಧರ್ಮ, ಆಕಾಶ, ಮತ್ತು ಕಾಲ ಇವನ್ನು 'ಪಂಚಾಸ್ತಿಕಾಯ' ಗಳೆಂದು ಹೇಳುತ್ತಾರೆ. ಇವುಗ ಳಲ್ಲಿ ಧರ್ಮ, ಅಧರ್ಮ, ಆಕಾಶ ಮತ್ತು ಕಾಲಗಳನ್ನು ಅಜೀವಗಳೆಂದೂ, ಪುದ್ಗಲಗಳೆಂದೂ ಕರೆಯುತ್ತಾರೆ "[೧೪].

ಭಗವಾನ್ ವರ್ಧಮಾನರ ಸಿದ್ಧಾಂತ :- ಭಗವಾನ್ ವರ್ಧಮಾನರ ಸಿದ್ಧಾಂತವು ಹಿಂದಿನ ೨೩ ತೀರ್ಥಂಕರರ ಧರ್ಮತೀರ್ಥದ ಉಪದೇಶವನ್ನೇ ಅನುಸರಿಸಿತ್ತು. ಪ್ರತೀ ತೀರ್ಥಂಕರರ ಉಪದೇಶದಲ್ಲಿ ಯಾವುದೇ ಪೂರ್ವಾಪರ ವಿರೋಧಕ್ಕೆ ಅವಕಾಶವಿಲ್ಲ. ಅಹಿಂಸೆ, ಅಪರಿಗ್ರಹ ಮತ್ತು ಅನೇಕಾಂತಗಳ ಪ್ರತಿಪಾದನೆಯೇ ಎಲ್ಲಾ ತೀರ್ಥಂಕರ ಪರಮಾತ್ಮರ ಉಪದೇಶದ ಮುಖ್ಯ ತತ್ವವಾಗಿದೆ ವರ್ಧಮಾನ ತೀರ್ಥಂಕರರ ಸಿದ್ಧಾಂತವು ಕೂಡ ' ಅ ' ಕಾರ ತ್ರಯವನ್ನು ಒಳಗೊಂಡ ಆತ್ಮವಾದದ ಮೇಲೆಯೇ ಆಧರಿತವಾಗಿತ್ತು. ಅವರು ಆತ್ಮನ ಅನಂತ ಶಕ್ತಿಯಲ್ಲಿ ನಂಬಿಕೆಯಿಡುತ್ತಿದ್ದರು. ಒಬ್ಬ ಆತ್ಮನ ಮೇಲೆ ಮತ್ತೊಬ್ಬ ಆತ್ಮನ ಅಧಿಕಾರವನ್ನು ಸ್ವೀಕರಿಸಿರಲಿಲ್ಲ. ಒಬ್ಬ ಆತ್ಮನ ಮೇಲೆ ಮತ್ತೊಬ್ಬ ಆತ್ಮನ ಅಧಿಕಾರವನ್ನು ಮಾನ್ಯತೆ ಮಾಡಿದರೆ ಆತ್ಮನ ಶಕ್ತಿಗಳಲ್ಲಿ ಅಪನಂಬಿಕೆ ಮಾಡಿದಂತೆ ಆಗುತ್ತದೆ

" ಅಪ್ಪಾ ಕತ್ತಾವಿಕತ್ತಾಯ,  ದುಹಾಣಸುಹಾಣಯ |

ಅಪ್ಪಾ  ಮಿತ್ತಮ ಮಿತ್ತಂ, ದುಪ್ಪಟ್ಠಿಯ ಸುಪಟ್ಠಿಓ ||

ಎಂಬಂತೆ ಆತ್ಮನೇ ತನ್ನ ಸುಖಃ ದುಖಃಗಳಿಗೆ ಕಾರಣನು ತನ್ನ ವಿನಾಶಕ್ಕೆ ಅಂದರೆ ಕರ್ಮಬಂಧಕ್ಕೆ ಸಿಕ್ಕಿ ಬೀಳುವುದಕ್ಕೂ ಅವನೇ ಕಾರಣ ಸನ್ಮಾರ್ಗದಲ್ಲಿ ನಡೆದಾಗ ಆತ್ಮನು  ತನಗೇ ತಾನೇ ಮಿತ್ರನಾಗುವನು, ದುರ್ಮಾರ್ಗದಲ್ಲಿ ನಡೆದಾಗ  ಸಂಸಾರದಲ್ಲಿಸಿಕ್ಕಿ ತನಗೆ ತಾನೇ ಶತ್ರುವಾಗುವನು. ಆತ್ಮನೆ ತನ್ನ ಉತ್ಥಾನ ಮತ್ತು ಪತನಗಳ ಉತ್ತರದಾಯಿಯಾಗುವನು ಎಂಬುದು ವರ್ಧಮಾನ ತೀರ್ಥಂಕರ ಪರಮಾತ್ಮರ ಸಂದೇಶ. ಈ ಸಂದೇಶವೂ ಸಾರ್ವತ್ರಿಕವೂ ಮತ್ತು  ಸಾರ್ವಕಾಲಿಕವೂ ಆಗಿದೆ. ಇದು ಯಾವುದೇ ಒಂದು ನಿರ್ದಿಷ್ಟವಾದ ವರ್ಗ, ವರ್ಣ, ಜಾತಿ, ಮತ್ತು ದೇಶಗಳಿಂದ ಹೊರತಾಗಿತ್ತು. ಅವರು ಆತ್ಮನನ್ನು ಯಾವುದೇ ವರ್ಗದಿಂದಾಗಲೀ, ವರ್ಣದಿಂದಾಗಲೀ, ಜಾತಿಯಿಂದಾಗಲೀ ಸಂಬಂಧಗೊಂಡಿದ್ದ ಎಲ್ಲೆಗಳಿಗೆ ಒಳಪಡಿಸಿರಲಿಲ್ಲ. ಎಲ್ಲಾ ಕ್ಷೇತ್ರಗಳ ನಿವಾಸಿಗಳಿಗೆ ತಮ್ಮ ಚರಮ ಮತ್ತು ಪರಮೋತ್ಕೃಷ್ಟತೆಯನ್ನುಂಟು ಮಾಡಿಕೊಳ್ಳುವ ಆತ್ಮ ವಿಶ್ವಾಸವನ್ನು ಜಾಗೃತಗೊಳಿಸುತ್ತದೆ. ವರ್ಧಮಾನ ಭಗವಾನರ ಈ ಆತ್ಮ ಸಮಭಾವೀ ಶಾಶ್ವತ ಸಂದೇಹವು ಅಂತ್ಯಜರು ಶೂದ್ರರಿಂದ ಹಿಡಿದು ಬ್ರಾಹ್ಮಣರವರೆಗೂ ಸ್ತ್ರೀಯರು ಮತ್ತು ಪುರುಷ ಹೆಚ್ಚೇನು ಪಶುಪಕ್ಷಿಗಳಿಗೂ ಆತ್ಮ ವಿಕಾಸವನ್ನು ಉಂಟುಮಾಡಿಕೊಳ್ಳುವ ಭರವಸೆಯನ್ನು ಮೂಡಿಸಿತು. ಇದರ ಪರಿಣಾಮವಾಗಿ ವರ್ಧಮಾನರ ಪಾದಮೂಲಕ್ಕೆ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಭಿಲ್ಲರು, ಶೂದ್ರರು ಎಲ್ಲರೂ ಒಂದು ಆತ್ಮ ಕಲ್ಯಾಣ ಮಾಡಿಕೊಂಡು ಮೋಕ್ಷಮಾರ್ಗದಲ್ಲಿ ನಡೆಯುವ ಪಥವನ್ನು ಪ್ರಶಸ್ತಗೊಳಿಸಿಕೊಂಡರು" [೧೫].

ಶ್ರೀಮತಿ ರಾಧಮ್ಮನವರ ಕವಿತಾ ಪ್ರೌಢಿಮ ಆಗಾಧವಾದದ್ದು ಇದನ್ನು ತಿಳಿದಿದ್ದ ಮೂಡಾರು ಧರ್ಮ ಪಾಲ ಇಂದ್ರರು ರಾಧಮ್ಮನವರನ್ನು ಭೇಟಿಯಾದಾಗಲೆಲ್ಲ ಹೀಗೆನ್ನುತ್ತಿದ್ದರು. " ತಾವು ಚಿಕ್ಕ ಪುಟ್ಟ ಕವಿತೆಗಳನ್ನೂ, ಹಾಡುಗಳನ್ನೂ ಎಷ್ಟೋ ಬರೆದಿದ್ದೀರಿ ಇಷ್ಟರಿಂದ ಮಾತ್ರವೇ ತಮ್ಮ ಕಾವ್ಯದ ಪ್ರತಿಭೆ,  ಪ್ರೌಢಿಮೆ,  ಮತ್ತು ಭಾವನಾ ಪೂರ್ಣವಾದ ಕೃತಿಗಳನ್ನು ರಚಿಸುವ  ಕೌಶಲ್ಯಗಳು  ಶಾಶ್ವತವಾಗಿ ಉಳಿಯಲಾರದು, ಹಾಗೂ ಬೆಳಕಿಗೆ ಬರಲಾರದು ನಮ್ಮ ಕನ್ನಡದ ಮಹಾಕವಿಗಳಾದ ಆದಿಕವಿ ಪಂಪ, ರನ್ನ, ಜನ್ನ, ನಾಗಚಂದ್ರ ಆಗ್ಗಳ ಮತ್ತು ರತ್ನಾಕರ ಮೊದಲಾದ ಅನೇಕ ಕವಿಗಳು  ಚಿಕ್ಕ ಪುಟ್ಟ ಎಷ್ಟೋ ಕಾವ್ಯಗಳನ್ನೂ ಬರೆದಿರಬಹುದು. ಆದರೆ ಅವುಗಳಲ್ಲಿ ಒಂದಾದರೂ ನಮಗೆ ಕಂಡು ಬಂದಿಲ್ಲ. ಆ ಮಹಾಕವಿಗಳೆಲ್ಲರೂ ಒಂದೆರಡು ಬೃಹತ್ ಕಾವ್ಯ ರಚಿಸಿದುದರ ಪರಿಣಾಮದಿಂದಲೆ ವಿಶ್ವ ವಿಖ್ಯಾತ ಕವಿಗಳಾಗಿ ಇಂದು ಉಳಿದಿದ್ದಾರೆ. ಅದರಿಂದ  ಕೊನೆಯ ತೀರ್ಥಂಕರ ಪರಮಾತ್ಮರಾದ ಭಗವಾನ್  ೧೦೦೮ ಶ್ರೀ ವರ್ಧಮಾನ ಚರಿತೆಯನ್ನು ಸುಲಭವಾಗಿ ಎಲ್ಲರಿಗೂ ಅರ್ಥವಾಗುವಂತೆ ಸಾಂಗತ್ಯ ಛಂದಸ್ಸಿನಲ್ಲಿ  ತಾವು ರಚಿಸಿದರೆ ತುಂಬಾ ಉಪಕಾರವಾಗುತ್ತದೆ. ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು ಅನ್ನುವುದಕ್ಕಿಂತ ಕಾವ್ಯ ಬರೆಯಿರಿ ಎಂದು ಪ್ರಾರ್ಥಿಸಿ ತಮ್ಮ ಅಪೇಕ್ಷೆಯನ್ನು ಹೇಳಿದರು [೧೬] ". ಆದರೆ ತದನಂತರದಲ್ಲಿ ಮನಬಿಚ್ಚಿ  ತಮ್ಮ ಮನಸ್ಸಿನಲ್ಲಿ ಮೂಡಿದ ಭಾವನೆಯನ್ನು ವ್ಯಕ್ತಪಡಿಸುವರು. ಈ ಭಾವನೆ ತಮ್ಮ ಕಾವ್ಯದ   ಮೊದಲ ಸಂಧಿಯಲ್ಲಿ ಪದ್ಯರೂಪೇನ  ವ್ಯಕ್ತಪಡಿಸಿರುವುದನ್ನು ಕಾಣಬಹುದು.

ಮೂಡಾರು ಧರ್ಮಸಾಲ ಇಂದ್ರರ ಮಾತಿಗೆ ರಾಧಮ್ಮನವರ ಪ್ರತಿಕ್ರಿಯೆ ಮೊದಲಿಗೆ ಹೀಗಿತ್ತು."  ನಾವು ಹೇಳುವುದು ಒಂದು ದೃಷ್ಟಿಯಿಂದ ನಿಜವಾದರೂ ಇದು ಮಹಾ ಕವಿಗಳಿಗೆ ಹೊಂದುವ ಮಾತು ನಾನು ಇದಕ್ಕೆ ಅರ್ಹಳಾದವಳಲ್ಲ ಹೊರಲಾರದ ಹೊಣೆಯನ್ನು ನೀವು ನನ್ನ ಮೇಲೆ ಹೊರಿಸುತ್ತಿದ್ದೀರಿ. ಏಕೆಂದರೆ ಪಂಪ, ರನ್ನ,

ಜನ್ನ, ಮೊದಲಾದವರು ಬರೆದಿರುವಂತಹ ಉತ್ಕೃಷ್ಟಕಾವ್ಯಗಳನ್ನು ನನ್ನಂತಹ ಅಲ್ಪಜ್ಞಾನಿ ಬರೆಯಲು ಸಾಧ್ಯವೇ? ಮಹಾ ಕಾವ್ಯಗಳಿಗೆ ಸ ಂಬಂಧಿಸಿದ ಅಲಂಕಾರ ಶಾಸ್ತ್ರ, ಮೊದಲಾದ ಸಾಧನೆಗಳನ್ನು ನಾನೆಲ್ಲಿ ಸಾಧಿಸಿದ್ದೇನೆ ? ಅದಕ್ಕೆ ತಕ್ಕಷ್ಟು ವಿದ್ಯೆ ನನ್ನಲ್ಲೇನಿದೆ ? ನಾನು ಕಲಿತಿದ್ದು ಕೇವಲ ಮೂರನೆ ತರಗತಿ ಎಲ್ಲಕ್ಕಿಂತಲೂ ಇದಕ್ಕೆ ಪೂರ್ವ ಪುಣ್ಯದ ಅವಶ್ಯಕತೆ ಹೆಚ್ಚಾಗಿದೆ. ಸಾಲದುದಕ್ಕೆ ನಾನು ಈಗ ೫೪ ವಯಸ್ಸಿನವಳಾಗಿದ್ದು ಅನಾರೋಗ್ಯವಂತಳೂ ಆಗಿದ್ದೇನೆ. ಒಂದು ವೇಳೆ ಬರೆಯಲು ಆರಂಭಿಸಿದರೂ ಇದನ್ನು ಕೊನೆಗೊಳಿಸುತ್ತೆನೆಂಬ ಭರವಸೆಯಂತು ನನಗೆ ಇಲ್ಲವೇ ಇಲ್ಲ ಆದ್ದರಿಂದ ಇಂತಹ ಮಹತ್ಕಾರ್ಯಕ್ಕೆ ಕೈ ಹಾಕಿ ಸುಟ್ಟುಕೊಳ್ಳುವ ಇಚ್ಛೆ ನನಗೇಕೆ ಬೇಕು ?" [೨೭].

ತಮಗಿದ್ದಂತಹ ಸಂದೇಹದಂತೆ ಕಾರ್ಯಾರಂಭಿಸುವ ಮೊದಲು ಇವರಿಗೆ ಸಾಂಕೇತಿಕವಾಗಿ ವರ ಪ್ರಸಾದವದ ಪುಷ್ಪವು ಪೂರ್ಣವಾಗಿ ಕೆಳಗೆ ಬೀಳದೆ ಅರ್ಧದಲ್ಲಿಯೇ ನಿಲ್ಲುವುದು ತೋರಿಸಿರುವುದು, ಅನಂತರ ಮತ್ತೊಮ್ಮೆ ಬೇರೆಯೊಂದು ಪುಷ್ಪ ಪೂರ್ಣವಾಗಿ ಕೆಳಗೆ ಬೀಳುವುದರ ಮೂಲಕ ಕೃತಿಯ ಪೂರೈಕೆಯನ್ನು ಸೂಚಿಸುವುದನ್ನು ಕಾಣಬಹುದಾಗಿದೆ.

ಕಾವ್ಯರಂಭಗೊಂಡ ಬಗ್ಗೆ - "ಸಿಂಹನ ಗದ್ದೆಯ ಮಹಾಮಾತೆ ಶ್ರೀ ಜ್ವಾಲಾ ಮಾಲಿನಿ ದೇವಿ ಸನ್ನಿಧಿಯಲ್ಲಿ ದಿನಾಂಕ ೨೮.೦೮.೧೯೬೦ ರಂದು ಪೂರ್ವಾಹ್ನ ಶುಭಲಗ್ನದಲ್ಲಿ ಭಗವಾನ್ ೧೦೦೮ ಚಂದ್ರ ಪ್ರಭ ಸ್ವಾಮಿಯವರ ದಿವ್ಯ ಸನ್ನಿಧಿಯಲ್ಲಿ ಅಭಿಷೇಕ, ಪೂಜೆ, ಪ್ರಾರ್ಥನೆ ಸಲ್ಲಿಸಿ ಮಹಾಮಾತೆ ಜ್ವಾಲಾ ಮಾಲಿನಿ ದೇವಿಯ ಸನ್ನಿಧಿಯಲ್ಲಿ ಸಮಾಜದ ಗಣ್ಯರು, ಇಂದ್ರರೆದುರಿಗೆ ಗ್ರಂಥಾರಂಭಕೆ ಮಹಾ ಮಾತೆಯಲ್ಲಿ ಪ್ರಸಾದ ಬೇಡಿದಾಗ ಏನಾಯಿತೆಂದರೆ ಮೂಡಾರು ಧರ್ಮಪಾಲ ಇಂದ್ರ ಹೀಗೆಂದಿದ್ದಾರೆ ಒಂದೆರಡು ನಿಮಿಷಗಳ ನಂತರ ಪ್ರಸಾದವಾಯಿತು. ಆದರೆ ಪುಷ್ಪವು ಪೂರ್ಣವಾಗಿ ಕೆಳಕ್ಕೆ ಬೀಳದೆ ಅರ್ಧದಲ್ಲಿಯೇ ನಿಂತಿದ್ದು ಇದು ರಾಧಮ್ಮನಲ್ಲಿ ಖೇದವನ್ನಂಟುಮಾಡಿತು ಆದರೆ ಮೌನ ಪ್ರಾರ್ಥನೆ ನಂತರ ಧರ್ಮದರ್ಶಿಗಳ ಆದೇಶದಂತೆ ಪುನಃ ದೇವಿಯಲ್ಲಿ ಪ್ರಸಾದ ಬೇಡಿದಾಗ ಪ್ರತ್ಯೇಕವಾಗಿಯೇ ಒಂದು ಹೂವು ಪೂರ್ಣವಾಗಿ ಕೆಳಕ್ಕೆ ಬಿದ್ದಿತು. ಆನಂದಭರಿತಳಾದ ಕವಯತ್ರಿ ವರ್ಧಮಾನ ಚರಿತೆ ಕಾವ್ಯದ ರಚನೆಯನ್ನಾರಂಭಿಸಿದರು " [೨೮]. ಭಗವಾನ್ ವರ್ಧಮಾನರ ಸಿದ್ಧಾಂತವು ಹಿಂದಿನ ಇಪ್ಪತ್ತ ಮೂರು.ತೀರ್ಥಂಕರ ಧರ್ಮ ತೀರ್ಥದ ಉಪದೇಶವನ್ನು ಅನುಸರಿಸುತ್ತದೆ ಎಲ್ಲ ತೀರ್ಥಂಕರರ ಉಪದೇಶದಲ್ಲಿ ಯಾವುದೇ ಪೂರ್ವಪರ ವಿರೋಧಕ್ಕೆ ಅವಕಾಶವಿಲ್ಲ ಅಹಿಂಸೆ, ಅಪರಿಗ್ರಹ ಮತ್ತು ಅನೇಕಾಂತಗಳ ಪ್ರತಿಪಾದನೆಯೇ ಎಲಾ ತೀರ್ಥಂಕರ ಪರಮಾತ್ಮರ ಉಪದೇಶದ ಮುಖ್ಯತತ್ವವಾಗಿದೆ.

ಕಾವ್ಯದ ಮೊದಲ ಸಂಧಿಯಲ್ಲಿ ತಾನು ಕಾವ್ಯ ಬರೆಯಲು ಸಮರ್ಥಳಲ್ಲ ಎಂದು ಬಹಳ ವಿನಮ್ರವಾಗಿ ಹೇಳಿಕೊಂಡಿರುವುದು ಹಾಗೂ ತಾನು ಸರಳ ಶೈಲಿಯ ಕನ್ನಡದಲ್ಲಿ ಕಾವ್ಯವನ್ನು ರಚಿಸುವ ಪಂಡಿತರು ಮೆಚ್ಚುವಂತಹ ಪಾಂಡಿತ್ಯವಿಲ್ಲವೆನಗೆ ಬಿಡುವಿನ ವೇಳೆಯಲ್ಲಿ ಕಾವ್ಯ ರಚಿಸುತ್ತೇನೆಂದು. ದೇಹ ದಂಡಿಸಲು ಅಸಮರ್ಥಳು, ನಿತ್ಯರೋಗಿ ನಾನು, ವಯಸ್ಸಾಗಿದೆ ಸಂಸ್ಕೃತವನ್ನು ತಿಳಿಯದ ನನ್ನ ಅಕ್ಕ ತಂಗಿಯರು, ಅಣ್ಣ ತಮ್ಮಂದಿರಿಗಾಗಿ ಜಿನ ಕತೆಯನ್ನೊದಿ ತಿಳಿಯಲಿ. ಈ ಕನ್ನಡ ಕೃತಿಯನ್ನು ಬರೆಯುತ್ತಿರುವೆ ಇದರಲ್ಲಿ ಸೂಚ್ಯಾರ್ಥಗಳಿಲ್ಲ , ಬಿನ್ನಾಣವಿಲ್ಲ, ಆಡಂಬರವಿಲ್ಲ ಸುಲಭ ಪದಗಳನ್ನು ಜೋಡಿಸಿ ಬರೆಯುವೆ, ಹಾಡುಗಬ್ಬದ ಮಂಗಳ ರೂಪದ ಮಹಿಮೆ ಹಾಡಲು ಹೆಂಗಸರು, ಬಾಲರು, ವೃದ್ಧರು ಸಾಂಗತ್ಯದೊಳು ಸುಲಭವಾಗಿ ತಿಳಿಯಲು ಸಾಧ್ಯವೆಂದು ಸಾಂಗತ್ಯದಲ್ಲಿ ಕಾವ್ಯ ಬರೆಯುತ್ತಿರುವೆ ವ್ಯಾಕರಣ ದೋಷವಿದ್ದಲ್ಲಿ ಪಂಡಿತರು ಮನ್ನಿಸಬೇಂದು ಕೇಳಿಕೊಂಡಿದ್ದಾಳೆ . ತಮ್ಮ ಮನದ ಅನಿಸಿಕೆಗಳನ್ನು ಈ ರೀತಿಯಲ್ಲಿ ಪದ್ಯದಲ್ಲಿ ಹೇಳಿದ್ದಾರೆ. ಈ ಕೆಳಗಿನ ಪದ್ಯಗಳಲ್ಲಿ ಕವಯತ್ರಿ ರಾಧಮ್ಮನವರ ಸಜ್ಜನಿಕೆಯನ್ನು, ಸ್ವಂತ ವಿಚಾರದ ಕುರಿತು ಅಭಿವ್ಯಕ್ತಿಯನ್ನು ಕಾವ್ಯ ರಚಿಸಿದ ಉದ್ದೇಶವನ್ನು ಕಾಣಬಹುದು.

ಅರಿಯೆನು ಛಂದೋಲಂಕಾರ ಶಾಸ್ತ್ರಗಳ ನಾ | ನರಿಯೆನು ಪ್ರಾಸ ಭಾವಂಗಳನು ||
ಸರಳ ಶೈಲಿಯೊಳು ಕನ್ನಡದೊಳೀ ಕಾವ್ಯದ | ವಿರಚನೆಗೈಯಲು ತೊಡಗಿಹೆನು || ೧೦ ||

ಶ್ರೇಷ್ಠ ಪಂಡಿತರು ಮೆಚ್ಚುವ ಕಾವ್ಯ ಬರೆವ ವಿಶಿಷ್ಟ ಪಾಂಡಿತ್ಯವಿಲ್ಲೆನೆಗೆ ||
ಅಟ್ಟುಂಡು ಬಿಡುವಿನ ವೇಳೆಯ ಕಳೆಯಲು | ತೃಷ ಸಾಧನವ ಕೈಗೊಂಡೇ || ೧೧ ||

ಕಾಯದಂಡನೆ ಗೈಯಲ ಸಮರ್ಥೆ ಚಿರರೋಗಿ | ಆಯುಷ್ಯ ಸವೆಯುತ್ತಲಿಹುದು ||
ಶ್ರೇಯೋಭಿವೃಧ್ಧಿಗುಪಾದೇಯ ವೆಂದು ನಾ | ನಾಯ್ದು ಕೊಂಡಿರುವೆನ್ನೀ || ೧೨ ||

ಸಕ್ಕದವರಿಯದೆನ್ನಂದದಣ್ಣಂದಿರು | ಅಕ್ಕ ತಂಗಿಯರು ತಾಳಿಮುದದೇ ||
ಅಕ್ಕರೆಮಿಗೆ ಜಿನಕತೆಯೋದಿ ತಿಲಯಲು | ತಕ್ಕ ಕನ್ನಡ ಕೃತಿಗೈವೇ || ೧೩ ||

ಗೂಡಾರ್ಥಗಳ ಚಮತ್ಕಾರ ಬಿನ್ನಣಮಿಲ್ಲ | ಆಡಂಬರಮೆನಿತಿಲ್ಲ ||
ಜೋಡಿಸಿ ಸುಲಭ ಶಬ್ಬಗಳನ್ನು ರಚಿಸುವೆ ಪಾಡುಗಬ್ಬವ ಕನ್ನಡದೊಳಗೆ || ೧೪ ||

ಮಂಗಳರೂಪನ ಮಹಿಮೆಯ ಪಾಡಲು | ಹೆಂಗಳು ಬಾಲ ವೃದ್ಧರಿಗೆ ||
ಸಾಂಗತ್ಯ ಸುಲಭ ಮೇಣ್ ಸೊಗಸಹುದೆಂದು | ಸಾಂಗತ್ಯದೊಳು ಕೃತಿಗೈವೇ || ೫ ||

ವರ ಶೃದ್ದೆಯಿಂದಾನು ಬರೆದಿಹ ಕಾವ್ಯದೊ | ಳಿರುವ ವ್ಯಾಕರಣದೋಷಗಳ ||
ಪರಮ ಪಂಡಿತವರ್ಯರು ಸಹಾನುಭೂತಿಯ ತೋರಿ | ಕೊರತೆಯ ಪರಿಹರಿಸುವುದು ||

ಪುತ್ತೂರು ಚೈತ್ಯಾಲಯದ ಶಾಂತಿನಾಥನಿಂದ ತೊಡಗಿ, ಅಮಲಕಾಖ್ಯಪುರದ ಹಿರಿಯಂಗಡಿಯ, ಕಾರ್ಕಳಪುರದ, ವರಮೂಡಬಿದಿರೆಯ ಪೊಳೆವ ಸಿಂಹನ ಗದ್ದೆ ಜ್ವಾಲಾಮಾಲಿನಿಯ ಪೊಂಬುಚ್ಚ ಪುರದ, ಬೆಳ್ತಂಗಡಿಯ ಹಾಗೂ ಶ್ರವಣಬೆಳಗೊಳದ ಗುಮ್ಮಟ ಜಿನ ರಾಜ ಮತ್ತಿತರ ಚೈತ್ಯಾಲಯಗಳ ತೀರ್ಥಂಕರನ್ನು ನೆನೆಯುತ್ತಾ ಕಾವ್ಯ ಕಥೆಯನ್ನು ಬರೆಯಲು ತೊಡಗುತ್ತಾರೆ.

ಪುತ್ತೂರ ಪುರದ ಚೈತ್ಯಾಲಯದೊಳಗಿಹ | ಮುಕ್ತೀಶ ಶಾಂತೀಶಗೆರಗಿ ||
ಮತ್ತೆ ಬೆಳ್ತಂಗಡಿ ಪುರ ದೊಳಗಿರುತಿಹ | ಚೈತ್ಯಾಲಯ ಮೂರರೊಳಗೆ || ೪೫ ||

ಮೆರೆವ ಆಮಲಕಾಖ್ಯಪುರದ ಬಸದಿಯೊಳ | ಗಿರುವ ಶ್ರೀಮದನಂತಜಿನರ ||
ಚರಣ ಕೆರಗಿ ಬೇಡುವೆ ವಿಘ್ನಗಳ ಪರಿ | ಹರಿಸಿ ರಕ್ಷಿಸಿ ಸ್ವಾಮೀಯೇಂದು || ೫೦ ||

ಹಿರಿಯಂಗಡಿಯ ನೇಮಿನಾಥನಿಗೊಂದಿಸಿ | ಪರಮ ಭಕ್ತಿಯೊಳು ಕೀರ್ತಿಸುವೆ ||
ಮೆರೆಯುವಪದಿನೆಂಟು ಜಿನ ಗೃಹಗಳೊಳಿರ್ಪ | ಅರುಹಬಿಂಬಗಳನರ್ಚಿಸುವೆ || ೫೧ ||

ಜಸವೆತ್ತ ಕಾರ್ಕಳಪುರದೊಳು ನೆಲಸಿಹ | ಅಸಮದುಮಹೋನ್ನತ ಮೂರ್ತಿ ||
ನಸುನಗೆ ಮುಖದ ಭುಜಬಲಿ ಜಿನಪಾದ | ಬಿಸಜಯುಗಲವ ಪೂಜಿಪೆನು || ೫೨ ||

ಮೂಡಬಿದಿರೆಯ ಪದಿನೆಂಟು ಬಸದಿಗ | ಳರುಹನ ಪ್ರತಿಕೃತಿಗಳನು ||
ಮರೆಯದೆ ಮನದೊಳಗನುದಿನ ನೆನೆವೆನು | ಹರಿಯಲೆನ್ನಯ ಪಾಪವೆಂದು || ೫೪ ||

ಪೊಳೆವ ಸಿಂಹನ ಗದ್ದೆಯಲ್ಲಿ ರಾಜಿಪ ಚೈತ್ಯ | ನಿಲಯದಿ ಶೋಭಿಸುತ್ತಿರುವ ||
ಚೆಲುವ ಚಂದ್ರ ಪ್ರಭಜಿನರನು ಬಲಗೊಂಡು | ಬಲುಭಕ್ತಿಯಿಂದ ವಂದಿಸುವೆ || ೫೪ ||

ಪೊಂಬುಚ್ಚಪುರದ ಪಾರಿಶ್ವಜಿನರ ಚರಣಂ | ಬುಜಕೆರಗಿ ಪೂಜಿಸುವೆ ||
ಅಂಬ ಪದ್ಮಾಂಬೆಯ ಮಹಿಮೆಯ ಕೊಂಡಾಡಿ | ಸಂಭ್ರಮದಿಂದ ಕೀರ್ತಿಸುವೆ || ೫೪ ||

ಮೆರೆವ ಕರ್ಣಾಟದಿ ಶ್ರವಣ ಬೆಳ್ಗೊಳದಿಂದ್ರ | ಗಿರಿಯ ಮೇಲಿರ್ದು ರಾಜಿಸುವ ||
ಪರಮ ಗೊಮ್ಮಟ ಜಿನ ರಾಜನ ಬಲಗೊಂಡು | ಪರಮ ಭಕ್ತಿಯೊಳು ಕೀರ್ತಿಸುವೆ || ೬೧ ||

ಕನ್ನಡ ಕವಿಗಳಿಗೆ ಆಧಾರವೆನಿಸಿಹ ಕವಿಪರಮೇಷ್ಠಿ ಚೆನ್ನ ಶ್ರೀವಿಜಯರ ಪೂಜ್ಯ ಪಾದಾಚಾರ್ಯರನ್ನು ನೆನೆದು ಕೀರ್ತಿಸಿದ್ದಾರೆ ಕನ್ನಡ ಕವಿ ಸಾರ್ವಭೌಮ ರೆನಿಸಿದ ಪಂಪ, ರನ್ನ, ಜನ್ನ, ಪೊನ್ನ ರನ್ನು ನೆನೆಯುತ ಹೊಗಳಿದ್ದಾರೆ.

ಕನ್ನಡ ಕವಿ ಸಾರ್ವಭೌಮವೆನಿಪ ಪಂಪ | ಕನ್ನಡ ಕವಿ ಚಕ್ರವರ್ತಿ ||
ಎನ್ನುವ ಬಿರುದಾಂತ ರನ್ನನ ಪೊನ್ನನ | ಜನ್ನನ ನೆನೆಯುತ ಪೊಗಳುವೆನು || ೨೫ ||

ಜಿನ ಮತವನ್ನು ವರ್ಧಿಸಿದ ಜಿನ ಕವಿ ಕವಯತ್ರಿಯರನ್ನು ಸ್ಮರಿಸುತ್ತಾ, ಕವಿ ನೃಪತುಂಗ, ನಾಗಚಂದ್ರ , ಕವಯತ್ರಿ ಕಂತಿ, ಹೊಸ ರೀತಿಯಲ್ಲಿ ಕಾವ್ಯ ರಚಿಸಿದ ಆಂಡಯ್ಯ, ಕುಶಲ ಕಾವ್ಯ ರಚಿಸಿದ ನೇಮಿಚಂದ್ರ, ಒಳ್ಳೆಯ ಕೇಳಲು ಇಂಪಾದ ಕಾವ್ಯ ಬರೆದ ರಾಚಣ್ಣ, ಮಧುರ ಚೆನ್ನರ ಕುರಿತು ಜೈನ ಸಾಹಿತ್ಯವನ್ನು ಷಟ್ಪದಿಯಲ್ಲಿ ರಚಿಸಿದ ಭಾಸ್ಕರ ಕವಿ, ಬೊಮ್ಮರಸರರು ಹೀಗೆ ಮಂಗರಸವನ್ನು ಸಂತೋಷದಿನೆನೆವರು.

ಭಾರತವನ್ನು ಉದ್ದಡ ಷಟ್ಪದಿಯಲ್ಲಿ ರಚಿಸಿದ ಪಾಳು ಕವಿತೆಯನ್ನು, ಚಂದ್ರ ಪ್ರಭ ಚರಿತೆಯನ್ನು ಸಾಂಗತ್ಯದಿ ರಚಿಸಿದ ದೊಡ್ಡಯ್ಯನನ್ನು, ಕನ್ನಡ ವಾಗ್ದೇವಿಯ ಶಿಖರಕ್ಕೆ ಕೀರಿಟವಿಟ್ಟಂತೆ ಇರುವ ಶೃಂಗಾರಕವಿ ರತ್ನಾಕರವರ್ಣಿ ರಚಿಸಿದ ಭರತೇಶ ವೈಭವ, ಸ್ಮರಿಸುತ ಕುಮಾರವ್ಯಾಸ, ಲಕ್ಷ್ಮೀಶ, ಹರಿಹರ, ರಾಘವಾಂಕ ರಾಜಶೇಖರ, ಮುದ್ದಣ, ಷಡಕ್ಷರಿ, ಸರ್ವಜ್ಞರನ್ನು, ಭಾಷೆಯನ್ನು ಸರಳ ಗೊಳಿಸುವ ಚೆಲುವಾದ ಕನ್ನಡ ಪದ್ಯದಲ್ಲಿ ಸುಲಭ ಶೈಲಿಯ ಗೀತೆಗಳನ್ನು ರಚಿಸಿದ ಪುರಂದರ ದಾಸ ಮತ್ತು ಕನಕದಾಸರನ್ನು ಮರೆಯದೆ ನೆನೆಸಿರುವರು.

ಕನ್ನಡದೊಳಗೆ ಬೃಹತ್ಕಾವ್ಯ ವಿರಚಿಸಿ | ಉನ್ನತ ಗೌರವ ಕೀರ್ತಿ ||
ಯನ್ನುಗಳಿಸಿದ ಹಲವರೊಳು ಪ್ರಖ್ಯಾತ | ರನ್ನು ಬಣ್ಣಿಸುವೆ ಬಲ್ಲನಿತು || ೯೬ ||

ಸ್ಮರಿಪೆ ಕುಮಾರವ್ಯಾಸನ ಲಕ್ಷೀಶನ | ಹರಿಹರ ರಾಘವಾಂಕರರ ||
ವರರಾಜಶೇಖರ ಮುದ್ದಣ ಕವಿಯನು | ಸ್ಮರಿಪೆ ಷಡಕ್ಷರಿ ಸರ್ವ ಜ್ಞರ || ೯೭ ||

ಚೆಲುವ ಕನ್ನಡದೊಳು ಸುಲಲಿತಮೆನಿಸಿಹ | ಸುಲಭ ಶೈಲಿಯ ಗೀತಗಳನು ||
ಹಲವ ರಚಿಸಿದ ಪುರಂದರದಾಸರ | ನಲವಿನಿಂ ಕನಕನದಾಸರನು || ೯೮ ||

ಕಾವ್ಯದಲ್ಲಿ ಇಷ್ಟು ಮಾತ್ರವಲ್ಲದೆ ಇಪ್ಪತ್ತನೆಯ ಶತಮಾನದ ಮುಳಿಯ ತಿಮ್ಮಪ್ಪಯ್ಯ, ರಾಷ್ಟ್ರಕವಿ ಗೋವಿಂದ ಪೈ, ಬೇಂದ್ರೆ, ಪುಟ್ಟಪ್ಪ ನವರನ್ನು ಮರೆಯದೆ ಯಕ್ಷಗಾನ ರಚಿಸಿದ ಪಾರ್ತಿ ಸುಬ್ಬ, ಹದಿಬದೆಯ ಧರ್ಮ ಬರೆದ ಹೊನ್ನಮ್ಮನನ್ನು ಹೊಗಳುತ್ತಾ ಕೊನೆಯದಾಗಿ ಲಲನೆ ಚೆನ್ನಮ್ಮ ತಾನೋರ್ವಳೇ ಶತಮಾನದೊಳಗೆ ಸಂಸ್ಕೃತ ಕವಯತ್ರಿ ಪೊಳೆವ ಷಟ್‌ಸ್ತಬಕ, ಸದ್ಗ್ರಂಥವ ಬರೆಯುತ ಬೆಳಗಿದವಳನಿತ್ಯವೂ ನೆನೆವೆನೆಂದು ತನ್ನ ಮಾತೃಶ್ರೀಯವರನ್ನು ಅತ್ಯಂತ ಗೌರವದಿಂದ ನೆನೆದಿದ್ದಾರೆ.

ಇಪ್ಪತ್ತನೆಯ ಶತಮಾನದಿ ಕವಿಗಳೆಂ | ದೊಪ್ಪ ವಡೆದಕೆಲವರೊಳು ||
ಸುಪ್ರಸಿದ್ಧರನು ಪೊಗಳುವೆನು ಮುಳಿಯ ತಿ | ಮ್ಮಪ್ಪಯ್ಯ ಮೊದಲಾದವರನು || ೯೯ ||

ವರರಾಷ್ಟ್ರ ಕವಿಯೆಂಬ ಬಿರುದನು ಧರಿಸಿದ | ಹಿರಿಯ ಗೋವಿಂದ ಪೈ ಗಳನು ||
ಸ್ಮರಿಸಿ ದತ್ತಾತ್ರೇಯ ಬೇಂದ್ರೆ ಪುಟ್ಟಪ್ಪರ | ಮರೆಯದೆ ಮನದೊಳು ನೆನೆವೇ || ೧೦೦ ||

ಮುದದಿ ರಚಿಸಿ ಯಕ್ಷಗಾನ ಪೇಳ್ದವರೊಳು | ಮೊದಲಿಗಪಾರ್ತಿಸುಬ್ಬನನು ||
ಹದಿಬದೆಯರ ಧರ್ಮ ಬರೆದ ಹೊನ್ನಮ್ಮನ | ಚದುರತನನ ಪೊಗಳುವೆನು || ೧೦೧ ||

ಲಲನೆ ಚೆನ್ನಮ್ಮ ತಾನೋರ್ವಳೀ ಶತಮಾನ | ದೊಳಗೆ ಸಂಸ್ಕೃತ ಕವಯತ್ರಿ ||
ಪೊಳೆವ ಷಟ್‌ಸ್ತಬಕ ಸದ್ಗ್ರಂಥವ ಬರೆಯುತ | ಬೆಳಗಿದವಳ ನಿತ್ಯವು ನಾನು ನೆನೆವೆ ||

ಹೀಗೆ ನಿರರ್ಗಳವಾಗಿ ಒಂದೇ ಸಮನೆ ಬರೆಯಲಾರಂಭಿಸಿದ ಕವಯತ್ರಿಯು ಆಗಮೋಕ್ತವಾಗಿಯೂ, ಮನಸ್ಸಿಗೆ ಮುಟ್ಟುವಂತೆ, ಹೃದಯಸ್ಪರ್ಶಿಯಾಗಿ ಶ್ರೀ ವರ್ಧಮಾನ ಸ್ವಾಮೀಯ ಭವಾವಳಿಗಳನ್ನು ರಚಿಸಿದ್ದಾರೆ. ಜಿತಂಜಯ ಮುನಿಗಳ ಉಪದೇಶದಲ್ಲಿ ಭಗವಾನ್ ವರ್ಧಮಾನರ ಭವಾವಳಿಯನ್ನು ಒಟ್ಟಾಗಿ ಕಾವ್ಯದಲ್ಲಿ ಕೊಡಲಾಗಿದೆ. ಆಸನ್ನಭವ್ಯ ಜೀವಿಯಾದ ಸಿಂಹಕ್ಕೆ ಜಿತಂಜಯ ಚಾರಣ ಮುನಿಗಳು ಹೀಗೆ ಬೋದಿಸಿರುವುದನ್ನು ಕವಯತ್ರಿ ಈ ಕೆಳಗಿನಂತೆ ಉಲ್ಲೇಖಿಸಿದ್ದಾರೆ. ಪುರೂರದ ನೆಂಬ ಬೇಡನ ಭವದಿಂದ ಮೊದಲಾಗಿ ಪುರೂರವನ ಭವಕ್ಕಿಂತ ಹಿಂದೆ ಅನೇಕ ಭವಗಳಾಗಿದ್ದರೂ, ಇದು ಮೊದಲನೇ ಹೆಜ್ಜೆಯಾಗಿದೆ. || ೮೯ || ನೇ ಪದ್ಯದಿಂದ || ೧೦೩|| ಪದ್ಯಗಳ ವರೆಗೆ ವರ್ಧಮಾನ ತೀರ್ಥಂಕರರ ಭವಾವಳಿಗಳು.

ಹಿಂದೆ ಅನೇಕ ಕಾಲಗಳ ಪೂರ್ವದಲ್ಲಿ ನೀನೊಂದು ಕಾಡೊಳು ಬೇಡನಾಗಿ |
ಬಂದು ಜನಿಸಿ ಪುರೂರವನೆಂಬ ನಾಮವ | ಹೊಂದಿರಲಲ್ಲಿ ಗೈ ತಂದ || ೮೯ ||

ಜಿನಮುನಿಯಿಂದ ವ್ರತಗಳ ಕೈಗೊಂಡು | ಮನಮುಟ್ಟೆ ಪಾಲಿಸಿ ಸತ್ತು |
ಅನಿಮೇಷನಾಗಿ ಸೌಧರ್ಮ ಕಲ್ಪದಿ ಪುಟ್ಟಿ | ಅನುಭವಿಸುತಲಿರ್ದು ಸುಖವ || ೮೭ ||

ಇಂಥ ಸಂಖ್ಯಾತ ಭವಂಗಳನೆತ್ತಿದು | ರಂತ ದುಃಖದಿ ಬಹುಕಾಲ |
ಸಂತಾಪಗೊಂಡಲೆದಲೆದು ದುಷ್ಕರ್ಮೋಪ | ಶಾಂತಿಯಿಂದಲಿ ಬಳಿ ಕೊಮ್ಮೆ || ೯೩ ||

ಮುಂದೆ ಮರೀಚಿ, ಪರಿವ್ರಾಜಕ, ಸುರನಾಗಿ, ಭೂಸುರನಾಗಿ, ಪಶು ಪಕ್ಷಿ, ಕ್ರೀಮಿ ಕೀಟವಾಗಿ ಜನಿಸಿ, ಭಯಂಕರ ಕಷ್ಟಗಳನ್ನು ಅನುಭವಿಸಿ. ಹೀಗೆ ಮುಂದೆ ನರ ಜನ್ಮವೆತ್ತಿ ಭೂಸುರನಾಗಿ, ವೇದಾವೇದಾಂಗ ಪಾರಂಗತನಾಗಿ ಮಹೇಂದ್ರಕಲ್ಪದಿ ಸುರನಾಗಿ ಹುಟ್ಟಿ, ಬಲು ಸುಖವನ್ನು ಸವಿದು, ಕ್ಷತ್ರಿಯನಾಗಿ ಹುಟ್ಟಿ, ಧರೆಯಧಿಪತಿ ಪ್ರಜಾಪತಿಯ ಅಣುಗನಾಗಿ ತ್ರಿಷಷ್ಟನೆಂಬ ಅಭಿದಾನವ ಪಡೆದು ಕೊನೆಗೆ ತೀರ್ಥಂಕರನಾಗಿ ಜನಿಸಿದ ಬಗ್ಗೆ.|

ವರ್ತಿಸಿ ಚಕ್ರೇಶನಾಗಿ ನೀ | ನಂತಿಮ ತೀರ್ಥಂಕರನಾಗಿ ಜನಿಸಿ |
ಸಾರ್ಥಕ ಸಂಯಮ ಪರಿವ್ರಾಜಕನಾಗಿ | ಮುಕ್ತಿ ಸಂಪದನಾರ್ಜಿಸುವೆ || ೯೯ ||

ಹಿಂದೆ ನೀ ದುಮಾರ್ಗವಿಡಿ ದೈದಿಸಂಸಾರ | ವೆಂದೆಂಬ ಕಾನನ ಪೊಕ್ಕೆ |
ಮುಂದಾದರು ಮುಕ್ತಿ ಪಡೆಯಬೇಕೆಂದಿಚ್ಛೆ | ಯಿಂದಿರ್ದೆಯಾದೊಡೆ ಕೇಳು || ೧೦೦ ||

ಎಲೆ ಪ್ರಾಜ್ಞ | ಪೂರ್ವ ಭವದ ಸ್ಮರಣೆಯಲಿ ನೀ | ತಿಳಿದೆ ಹಿತ್ತಾಂಶಗಳನು ||
ತಳುವ ಮಾಡದಿನ್ನೂ ಶ್ರೀ ಜಿನ ಧರ್ಮಾಗಮ ತತ್ವಗ | ಳೊಳು ಶ್ರದ್ಧಾನ ಪೊಂದು || ೧೦೧ ||

ಶ್ರೀಧರ ತೀರ್ಥನಾಥ ಸಮವಸೃತಿ | ಗಾಧಾರದಿಂದನುಸರಿಸಿ |
ಆ ದಿವ್ಯ ಧ್ವನಿಯಿಂದಲರಿತ ವೃತ್ತಾಂತವ | ಬೋಧಿಸಿದೆನು ನಿನಗೆನಲು || ೧೦೨ ||

ಕವಯತ್ರಿ ರಾಥಮ್ಮನವರು ಮುನಿಗಳ ಉಪದೇಶವನ್ನುಭಗವಾನ್ ವರ್ಧಮಾನರ ಭವಾವಳಿಗಳ ವೃತ್ತಾಂತವನ್ನು ಸಂಕ್ಷಿಪ್ತವಾಗಿ ತಮ್ಮ ಕಾವ್ಯದಲ್ಲಿ ವರ್ಣಿಸಿದ್ದಾರೆ. ಮುಂದೆ ಕತೆಗಳಲ್ಲಿ ಮುನಿಗಳ ಉಪದೇಶವನ್ನು ಕೇಳಿದ ಸಿಂಹವು ತನ್ನ ಮನಸ್ಸನ್ನು ಪರಿವರ್ತನೆ ಹೊಂದಿ, ವ್ರತವನ್ನು ಸ್ವೀಕರಿಸಿ ಆಚರಿಸುತ್ತಾ.ಮುಂದಿನ ಜನ್ಮಗಳಲ್ಲಿ ಸಿಂಹಕೇತುನಾಗಿ, ಕನಕೋಜ್ವಲನೆಂಬ ಖೇಚರ ಪುತ್ರನಾಗಿ ಜನಿಸಿತು. ಮುಂದೆ ಏಳನೆಯ ಸ್ವರ್ಗದಲ್ಲಿ ಸಾಕೇತನಗರದ ಮಹರಾಜ ವಜ್ರ ಸೇನನಿಗೆ ಹರಿಷೇಣನೆಂಬ ಮಗನಾಗಿ, ಮುಂದೆ ಪುಂಡರೀಕಿಣಿ ನಗರದ ರಾಜ ಸುಮಿತ್ರನಿಗೆ ಪ್ರಿಯಮಿತ್ರನೆಂಬ ಮಗನಾಗಿ ಅಲ್ಲಿ ಏಕಛತ್ರ ಸಾಮ್ರಾಟನಾಗಿ ಮುಂದಿನ ಜನ್ಮದಲ್ಲಿ ಸೂರ್ಯ ಪ್ರಭನೆಂಬ ದೇವನಾಗಿ ಜನ್ಮ ತಾಳಿದನು. ಅಲ್ಲಿಂದ ಮುಂದೆ ಛತ್ರಪುರದ ರಾಜ ' ನಂದಿನಿ ವರ್ಧನ ' ನಿಗೆ ನಂದನ ಎಂಬ ಮಗನಾಗಿ ಅಲ್ಲಿಂದ ದೇವೇಂದ್ರನಾಗಿ ಅಚ್ಚುತಸ್ವರ್ಗದಲ್ಲಿ ಜನಿಸಿದನು. ಕೊನೆಯಭವದಲ್ಲಿ ಕುಂಡ ಪುರದ ಸಿದ್ಧಾರ್ಥ ಮತ್ತು ತ್ರಿಶಾಲ ದಂಪತಿಗಳಿಗೆ ' ವರ್ಧಮಾನ ' ನಾಗಿ ಜನಿಸಿದನು.

ಈ ರೀತಿಯಲ್ಲಿ ಕಾವ್ಯವನ್ನು ಮುಂದುವರೆಸಿಕೊಂಡು ಹೋಗುತ್ತಿದ್ದ ರಾಥಮತಿಯವರು ಅವರ ಅನಾರೋಗ್ಯದ ಕಾರಣ ಕಾವ್ಯಬರೆದು ಮುಗಿಸುವುದು ಸಂದೇಹವಾಗಿದ್ದರೂ ಜಿನ ಧರ್ಮದ ಪ್ರಚಾರ ಮಾಡುವ

ಸದುದ್ದೇಶದಿಂದ, ಒಳ್ಳೆಯ ಕೆಲಸವಾದ ವರ್ಧಮಾನ ಚರಿತೆಯನ್ನು ಬರೆಯತೊಡಗಿ ಒಂಬತ್ತನೇ ಸಂಧಿಯನ್ನು ತಲುಪಿದರು. ಈ ಸಂಧಿಯ ಕೊನೆಯ ಭಾಗದಲ್ಲಿ ಭಗವಾನ್ ವರ್ಧಮಾನರ ಬಾಲ್ಯ ಕಳೆದು ಯೌವ್ವನಕ್ಕೆ ಕಾಲಿಟ್ಟ ಸಂದರ್ಭ ಅವರ ಯೌವನವನ್ನು ಈ ರೀತಿಯಿಂದ ವರ್ಣಿಸಿದ್ದಾರೆ.

ಕಳೆದು ಬಾಲ್ಯವನಿಂತು ಯೌವನ ತಳೆದು | ಮೊಳೆ ದನಿತುತ್ಸೇಧನಾಗಿ |
ಪೊಳೆವ ಸ್ವಾಮೀಯ ದಿವ್ಯ ರೂಪವ ವರ್ಣಿಸ | ಲಳವೆಯಲ್ಪಜ್ಞೆಯಾದೆ ನಗೆ || ೫೬ ||

ಉಪಮಾತೀತ ವಸ್ತುವ ವ್ಯರ್ಥ ವರ್ಣಿಸ | ಲಪಹಾಸ್ಯಕೆಡೆಯಪ್ಪುದದರಿಂದ |
ಸುಪವಿತ್ರತೇಜ ಸೌಂದರ್ಯದ ರಾಶಿಯೆ | ವಪುವಾದುದಾ ಸ್ವಾಮಿಗೆನುವೆ || ೫೩ ||

ಶರಧಿಗೆ ಸಮಸಾಟಿಯಾದನ್ಯ ವಸ್ತುವೀ | ಧರೆಯೊಳಗಿರುವೆಂತಂತೆ |
ವರ ಪುಣ್ಯ ನಿಧಿ ತೀರ್ಥಂಕರನ ಸೌಂದರ್ಯಕೆ | ಸರಿವೆನಿಪುಪಮೆಗಳಿರದು || ೫೮ ||

ಅರಹಂತನಾದಾಗಲೇ ತ್ರೈಜ್ಞಾನಧರನಾಗಿ | ನಿರುಪಮ ಸಹಜಾತಿಶಯದೇ |
ಪರಮೌದಾರಿಕ ದೇಹವು ತೀರ್ಥನಾಥನ | ಹೊರತು ಬೇರೊಬ್ಬರಿಗಿಹುದೇ || ೫೯ ||

ಇವು ಕವಯತ್ರಿ ರಾಧಮತಿಯವರು ಬರೆದ ಕೊನೆಯ ಪದ್ಯಗಳಾದವು ಎನ್ನುವುದನ್ನು ಗಮನಿಸಬಹುದು. ಮುಂದಿನ ಪದ್ಯಗಳನ್ನು ಭುವನಹಳ್ಳಿ ಶರ್ಮರು ಬರೆದು ಕಾವ್ಯವನ್ನು ಮುಕ್ತಾಯಗೊಳಿಸಿರುವುದನ್ನು ಕಾಣಬಹುದಾಗಿದೆ.

೯ನೆಯ ಸಂಧಿಯ ೫೯ನೆಯ ಪದ್ಯವು ರಾಧಮ್ಮನವರು ಬರೆದ ಕೊನೆಯ ಪದ್ಯವಾಯಿತು, ಆನಂತರದಲ್ಲಿ ದಿನಾಂಕ ೩೧.೭.೧೯೭೦ ರಂದು ರಾಧಮ್ಮನವರು ಸ್ವರ್ಗವಾಸಿಯಾದರು. 'ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ' ಎಂದು ಖೇದದಿಂದ ಮೂಡಾರು ಧರ್ಮಪಾಲ ಇಂದ್ರರು ಹೇಳಿದರು. ಆದರೆ ಹುಟ್ಟಿದ ಮನುಷ್ಯನಿಗೆ ಸಾವು ನಿಶ್ಚಿತವಾದುದು ಎನ್ನುವುದು ಕಟುಸತ್ಯ ಎಂದು ಸಮಾಧಾನ ತಂದು ಕೊಳ್ಳಬೇಕಷ್ಟೇ. ಎಲೆ ಮರೆಯ ಕಾಯಿ ಶಾಶ್ವತವಾಗಿ ಮರೆಯಾಗಿ ಹೋಯಿತು.

ಒಂದೆರಡು ವರುಷಗಳವರೆಗೆ ವರ್ಧಮಾನಚರಿತೆ ಅನಾಥವಾಗಿದ್ದು ತದನಂತರದಲ್ಲಿ ಧರ್ಮಸ್ಥಳದ ಮಾತೃಶ್ರೀ ರತ್ನಮ್ಮನವರಲ್ಲಿ ಮತ್ತು ಧರ್ಮಸ್ಥಳದ ಧರ್ಮಾಧಿಕಾರಿ ಡಿ. ವೀರೇಂದ್ರ ಹೆಗ್ಗಡೆ ಯವರಲ್ಲಿ ಕೇಳಿದಾಗ ಶರ್ಮರು ಇದನ್ನು ಪೂರ್ಣಗೊಳಿಸಲು ಯೋಗ್ಯರು ಎಂದು ಅವರಿಗೆ ಈ ಕೆಲಸವನ್ನು ವಹಿಸಿಕೊಡಲಾಯಿತು ಎಂಬ ಉಲ್ಲೇಖವನ್ನು ಕಾವ್ಯದಲ್ಲಿ ಕಾಣಬಹುದಾಗಿದೆ.

ವರ್ಧಮಾನ ಚರಿತೆಯೆಂಬ ಕೃತಿಯಲ್ಲಿ ಕವಯತ್ರಿ ರಾಧಮ್ಮನವರು ಐಹಿಕ ಸುಖ ಹಾಗೂ ದುಃಖ

ಪಾರಲೌಕಿಕ ವಿಚಾರ ಹಾಗೂ ಪ ರಮ ಸತ್ಯಗಳನ್ನು ಉದಾಹರಣೆ ಸಮೇತ ವಿವರಿಸಿದ್ದಾರೆ. ಜನ್ಮಾಂತರದ ಕಲ್ಪನೆಯನ್ನು ಸೊಗಸಾಗಿ ವಿವರಿಸಿದ ಕವಯತ್ರಿಯು ಎರಡನೇ ಸಂಧಿಯಲ್ಲಿಮಗಧ ಸಾಮ್ರಾಟ ಕುಮಾರನಾದ ವಿಶ್ವನಂದಿಯ ಹಿಂದಣ ಜನ್ಮ ವೃತ್ತಾಂತವನ್ನು ಆಯಾ ಜನ್ಮಗಳ ಅವಧಿಯಲ್ಲಿ ಗೈದ ಸತ್ಕರ್ಮಗಳಿಂದ ಪಡೆದ ಪುಣ್ಯ ಪ್ರದವನ್ನು ಕಾರಣಾಂತರದಿಂದ ಗೈದ ದುಷ್ಕರ್ಮದಿಂದ ಕುಂದಿದ ನಿತ್ಕಷ್ಟ ಜೀವಿಯ ಜನ್ಮವನ್ನು ಅನುಭವಿಸಿದ ಸಂಕಷ್ಟಗಳನ್ನು ಮರಳಿ ಜನ್ಮ ವೆತ್ತಿ ಸಧಾಚಾರಿಯಾಗಿ ಸತ್ಪುಣ್ಯವನ್ನು ಪಡೆದು ದೇವ ಕಲ್ಪನಾಗಿಯೂ ಬದುಕಿದ ಚಿತ್ರಣವನ್ನು ಚಿತ್ರಿಸುವುದರೊಂದಿಗೆ ಪುಣ್ಯ ಕಾರ್ಯಗಳಿಂದ ಪ್ರಾಪ್ತಿಸಬಹುದಾದ ದಿವ್ಯ ಯೋಗ್ಯತೆಯನ್ನು ತೋರಿಸಿಕೊಟ್ಟಿದ್ದಾರೆ. ಅದೇ ರೀತಿ ಐಹಿಕ ಸುಖ ಭೋಗವು ನೀರ ಮೇಲಣ ಗುಳ್ಳೆಯಂತೆ ಕ್ಷಣ ಭಂಗುರವಾದದ್ದು ಎಂಬುವುದನ್ನು ವಿಶ್ವನಂದಿಯ ಅನುಭವ ಮುಖೇನ ವರ್ಣಿಸಿ ಸಕಲರಿಗೂ ಸುಲಭ ಗ್ರಾಹ್ಯವಾಗುವಂತೆ ಮಾಡಿದುದು ಕವಯತ್ರಿಯ ಕಾವ್ಯ ಕೌಶಲ್ಯವೇ ಆಗಿದೆ.

ಸತ್ಪುರುಷರ ರಕ್ಷಕನೆಂದೆನಿಸಿಹ | ಉತ್ತಮನಾ ವಿಶ್ವ ಭೂತಿ ||
ಅತ್ಯಂತ ಹರುಷದಿ ಗೌರವವೊಂದಿರೆ | ತತ್ಕಾಲದೊಳೊಂದುದಿವಸ || ೯೯ ||

ನಗರದ ಸೊಬಗನೀಕ್ಷಿಸುತಿರೆ ನಿಮಿಷದಿ | ಗಗನವ ಮುಸುಕುತ ಮುಗಿಲು ||
ಬಗೆಬಗೆಯಾಕಾರ ತೋರಿ ತತ್ ಕ್ಷಣದಿ ಮೈ | ದೆಗೆದು ಅಗೋಚರ ಮಾಗೆ || ೧೦೦ ||

ಸುಖ ಸೌಭಾಗ್ಯದ ಊರ್ಧ್ವಶಿಖರವನ್ನೇರಿ ರಾರಜಿಸುತ್ತಿದ್ದ ವಿಶ್ವನಂದಿಯು ತನ್ನ ಪರಿವಾರದಿಂದೊಡಗೂಡಿಯೂ, ಪತ್ನಿಯರೊಡಗೂಡಿ ದೇವಲೋಕದ ನಂದನವನಕ್ಕೆ ಸರಿಸಮಾನವಾದ ಉದ್ಯಾನದಲ್ಲಿ ಕ್ರೀಡಿಸುತ್ತಿರುತ್ತಾನ. ಆ ಹೊತ್ತಿಗಾಗಲೇ ದೈವದಾಟವೋ ಎಂಬಂತೆ ಅವನಲ್ಲಿ ಸತ್ಯದ ಸಾಕ್ಷಾತ್ಕಾರವಾಗುವ ಘಟನೆಯೊಂದು ಘಟಿಸುತ್ತದೆ. ಶುಭ್ರವಾದ ಆಗಸವನ್ನು ಕರಿಮೋಡಗಳು ಒಮ್ಮಿದೊಮ್ಮೆಗೆ ಮುಚ್ಚಿ ಕ್ಷಣದಲ್ಲೇ ಮಾಯವಾಗುತ್ತದೆ. ಇದನ್ನು ಕಂಡ ವಿಶ್ವನಂದಿಯು ಐಹಿಕವಾದ ಬದುಕು ಎಷ್ಟು ಎನ್ನುವುದನ್ನೂ ತಿಳಿದುಕೊಳ್ಳುತ್ತಾನೆ. ಮೋಡದಂತೆ ಕರಗಿ ಮಾಯವಾಗಬಲ್ಲ ಈ ಸಂಸಾರವೆಂಬುದು ಮೂರು ದಿನ, ಸುಖ ಸೌಭಾಗ್ಯಗಳು ತಾತ್ಕಾಲಿಕ, ಪರಮ ಸೌಖ್ಯವಿರುವುದೇ ಜಿನೇಶ್ವರನ ಪದದಲ್ಲಿ ಎನ್ನುವುದನ್ನು ಜ್ಞಾನೋದಯ ಹೊಂದಿ ತಮ್ಮ ವಿಶಾಕಭೂತಿಗೂ, ಯುವರಾಜ ಪದವಿಯನ್ನು ತನ್ನ ಮಗನೇ ಆದ ವಿಶ್ವನಂದಿಗೂ ವಹಿಸಿ ತಾನು ಜಿನೇಶ್ವರನ ಆರಾಧನೆಯಲ್ಲಿ ಆಯುಷ್ಯವನ್ನು ಕಳೆಯುವುದಾಗಿ ನಿಶ್ಚಯಿಸಿ ತೆರಳುತ್ತಾನೆ. ಈ ಪ್ರಕರಣದ ಉಲ್ಲೇಖದಿಂದ ಐಹಿಕ ಭೋಗ ಭಾಗ್ಯಗಳ ಅಮಲು ಹಾಗೂ ಅದರಿಂದ ದುಂಟಾಗುವ ದುರ್ಯೋಚನೆ, ಅದರೊಂದಿಗೆ ಪರಮ ಸತ್ಯದ ಸಾಕ್ಷಾತ್ಕಾರವಾದಾಗ ಆಗುವ ಪರಿರ್ವನೆ ಇವುಗಳನ್ನು ಕವಯತ್ರಿಯೂ ಮನ ಮುಟ್ಟುವಂತೆ ಭೋದಿಸುತ್ತಾರೆ.

ಉಗುರಿನಿಂದಪ್ಪ ಕಾರ್ಯಕ್ಕೆ ಚಂದ್ರಾಯುಧವನು | ತೆಗೆಯಲೇತಕೆ ಚಿಕ್ಕಪ್ಪಾಜಿ ||
ಹಗೆಗಳ ಹೊಗರಿನಿಳಿಸಲಾನೆ ಸಾಲ್ವೆನುತೆ | ಪ್ಪಗೆ ಪುರದೊಳಗಿರಿ ಸುಖದಿ || ೧೧೫ ||

ಕವಯತ್ರಿ ರಾಧಮ್ಮ ತನ್ನಲ್ಲಿ ಅಪಾರವಾದ ಜ್ಞಾನ ಸಂಪತ್ತು ಹಾಗೂ ಅನುಭವಗಳು ಸಂಗಮಿಸಿದ್ದರೂ ತನ್ನನ್ನು ಎಲ್ಲಿಯೂ ಹೊಗಳಿಕೊಳ್ಳದೆ. ಕವಯತ್ರಿಯ ಧೀಮಂತಿಕೆಯು ಮೇಲಿನ ಉಪಮೆಯೊಂದಿಗೆ ವೇದ್ಯವಾಗುತ್ತದೆ. ತನ್ನ ಅಗ್ರಜನಿಂದ ಪ್ರಾಪ್ತಿಸಿದ ಅಧಿಕಾರವನ್ನು ಪಡೆದ ವಿಶಾಖ ಭೂತಿಯು ತನ್ನ ಮಗನ ಸಂತೋಷದ ಸಲುವಾಗಿ ಯುವರಾಜನಾದ ತನ್ನ ಅಣ್ಣನ ಮಗನನ್ನು ರಾಜ್ಯದಿಂದ ಹೊರಗಟ್ಟುವ ಕುತಂತ್ರವನ್ನು ಯೋಜಿಸುತ್ತಾನೆ. ಒಡಹುಟ್ಟಿದವರೊಳಗೆ ಯಾವ ರೀತಿಯ ಗುಣ ವಿಭಿನ್ನಗಳಿರುತ್ತವೆ ಎನ್ನುವುದನ್ನು ಕವಯತ್ರಿ ಸೂಚ್ಯವಾಗಿ ಚಿತ್ರಿಸಿದ್ದಾರೆ. ವಿಶ್ವನಂದಿಯ ಹೃದಯ ವೈಶಾಲ್ಯ ಅದಕ್ಕೆ ವ್ಯತಿರಿಕ್ತವಾದ ವಿಶಾಖ ಭೂತಿಯ ಧೋರಣೆ ತಂದೆಯ ಸಚ್ಚರಿತೆಯನ್ನು ಮಗ ಯಾವ ರೀತಿ ರೂಢಿಸಿಕೊಂಡಿದ್ದಾನೆ ಎನ್ನುವುದಕ್ಕೆ ಯುವರಾಜ ವಿಶ್ವನಂದಿಯ ಮಾತಿನಿಂದ, ಮೇಲಿನ ಪದ್ಯ ಮುಖೇನ ಕವಯತ್ರಿ ಆ ಪಾತ್ರವನ್ನು ಎತ್ತರಕ್ಕೆ ಕೊಂಡೊಯ್ದಿದ್ದಾರೆ.

ನೆರೆದ ಸುಪುತ್ರ ನಿರ್ದಂತಾತನಿಗೆ ಸಲ್ಲ | ಲಿರುವ ಈ ರಾಜ್ಯ ಪಟ್ಟವನು ||
ಕರೆದೆನಗಿತ್ತ ಪ್ರೀತಿಯೊಳಣ್ಣನೆಂಬುದ | ಮರೆದನೇನೆಂಬೆ ಕೃತಘ್ನ || ೧೨೦ ||

ಕೃತಘ್ನತೆ ಎನ್ನುವುದನ್ನು ವಿಶಾಖಭೂತಿಯ ಕೃತಿಯಲ್ಲಿ ನಿರೂಪಿಸಿದ ಕವಯತ್ರಿಯು ಅದರೊಂದಿಗೆ ವಿಶ್ವನಂದಿಯ ಸಹೋದರ ವಾತ್ಸಲ್ಯವನ್ನೂ ಚಿತ್ರಿಸಿದ್ದಾರೆ. ಪ್ರಾಯ ಸಮರ್ಥನು ರಾಜಕೀಯಕ್ಕೆ ಸೂಕ್ತನೂ ಎನಿಸಿದ ಕುಮಾರಕನಿದ್ದು ವಯಸ್ಸನಲ್ಲಿ ಹಿರಿಯನಾದ ಸಹೋದರ ವಿಶಾಖಭೂತಿಗೆ ಮಹಾರಾಜ ಪದವಿಯನ್ನು ನೀಡಿ ತನ್ನ ಮಗನಿಗೆ ಕೇವಲ ಯುವರಾಜ ಪದವಿಯನ್ನು ಕೊಡುತ್ತೇನೆ. ಆದರೆ ದುಷ್ಟನ ಮನಸ್ಸಿನಲ್ಲಿ ಕೃತಘ್ನತೆಯೇ ಹೊರತು ಕತಜ್ಞತೆ ಇರಲಾರದು ಎಂಬಂತೆ ತನ್ನ ಮಗನ ಕ್ಷುಲ್ಲಕ ಕೇಳಿಕೆಗೆ ಒಡಂಬಟ್ಟ ವಿಶಾಖಭೂತಿ ಮಗನ ಶ್ರೇಯಸ್ಸಿಗಾಗಿ ತನಗೆ ಸರ್ವ ಸಂಪದವನ್ನಿತ್ತ ಅಣ್ಣನ ಆದರ್ಶವನ್ನು ಮರೆತು ಯುವರಾಜನಾದ ಅಣ್ಣನ ಮಗನನ್ನು ಊರಿಂದ ಹೊರಗೆ ಕಳುಹಿಸುವ ದುರ್ಯೋಚನೆಯನ್ನು ಹೊಂದುತ್ತಾನೆ. ಆದರೆ ಸಚ್ಚರಿತ್ರನಾದ ವಿಶ್ವನಂದಿಯ ಮಗನಲ್ಲಿ ಚಿಕ್ಕಪ್ಪನೆಸಗಿದ ಯಾವುದೇ ಕುಯುಕ್ತಿ ಪ್ರಭಾವ ಬೀರದೆ ಅನುಗ್ರಹ ರೂಪವಾಗಿಯೇ ಪರಿಣಮಿಸುತ್ತದೆ. ಮ್ಲೇಚ್ಛರನ್ನು ( ಅನ್ಯದೇಶಿಯರು ) ನಿಯಂತ್ರಿಸಿ ಮರಳಿ ಪುರಕ್ಕೆ ಆಗಮಿಸಿದ ಯುವರಾಜನಿಗೆ ತನ್ನ ಚಿಕ್ಕಯ್ಯನ ಕುತಂತ್ರದ ಅರಿವಾಗುತ್ತದೆ.|ತನ್ನ ತಂದೆಯಿಂದ ಅಧಿಕಾರವನ್ನು ಪಡೆದು ತನ್ನ ಪಾಲಿಗೆ ಅಪಕಾರಿಯಾದನೇ ಎಂದು ಸಿಟ್ಟುಕೊಂಡು ಇದಕ್ಕೆಲ್ಲಾ ಮೂಲಕಾರಣವಾದ ವಿಶಾಖನಂದಿಯನ್ನು ಬೆನ್ನಟ್ಟುತ್ತಾನೆ. ಆದರೆ ಪ್ರಾಣಭಯದಿಂದ ತತ್ತರಿಸಿದ ಅವನಲ್ಲಿ ದಯಾರ್ದ್ರ ಮನೋಭಾವ ಹೊಂದುತ್ತಾನೆ. ಪರಜೀವ ಕಾರುಣ್ಯವು ಜೈನ ಕುಲದಲ್ಲಿ ಎಷ್ಟು ಮಹತ್ವಿಕೆಯನ್ನು ಪಡೆದಿತ್ತು ಎನ್ನುವುದು ಇಲ್ಲಿ ಗಮನಿಸಬಹುದಾಗಿದೆ.

ದುರುಳರು ಎಂತಹ ಅಪಕೃತಿಯನ್ನು ಗೈದರೂ ಉತ್ತಮರ ಮೇಲೆ ಅದು ಯಾವುದೇ ದುಷ್ಪರಿಣಾಮವನ್ನುಬೀರದು ಬದಲಾಗಿ ದೈವ ಕಾರುಣ್ಯದಿಂದ ಸತ್ಫಲವೇ ಪ್ರಧಾನಿಸುವುದು "ದುರುಳರೆಸಗಿದಪಕಾರಗಳಿಂದ ಸತ್ಪುರುಷರಿ ಗುಪಕಾರವಹುದು " ಎನ್ನುವುದಕ್ಕೆ ವಿಶ್ವನಂದಿಯ ಜೀವನದಲ್ಲಿ ಆದ ಬದಲಾವಣೆಯೇ ಸಾಕ್ಷಿ. ಈ ಮೂಲಕ ನೀತಿ ಭೋದನೆಯನ್ನು ಕವಯತ್ರಿ ಮೇಲಿನ ಪದ್ಯದಲ್ಲಿ ಮಾಡಿದ್ದಾರೆ.

ಹಲವಾರು ಕವಿಗಳ ಕೃತಿಗಳೊಳಡಗಿರ್ದು | ಸಲೆ ಸಹಜತೆಯನು ಬೀರ್ವ ||
ಕೆಲವಾರು ಸಂದರ್ಭೋಚಿತ ಸನ್ನಿವೇಶವ | ನಳವಡಿಸಿಹೆ ಇದರೊಳಗೇ || ೧೩ ||

ಹಲವಾರು ಉ ದ್ಗ್ರಂಥಗಳ ಪಠಣ ಹಾಗೂ ಉದ್ದಾಮ ವಿದ್ವಾಂಸರ ಒಡನಾಟದಿಂದ ಒಬ್ಬ ಪರಿಪೂರ್ಣ ಕವಯತ್ರಿಯಾಗಿಯೇ ನಮ್ಮ ಕಣ್ಮುಂದೆ ನಿಲ್ಲುವ ರಾಧಮ್ಮನವರು ಇಹ ಪರಗಳ ಸಂಬಂಧವನ್ನು ಭವ ಬಂಧಗಳ ವಿಚಾರವನ್ನು ಸುಖ ದುಃಖಗಳ ಅನುಭವವನ್ನು ತಮ್ಮ ಅನುಭವಾಮೃತದ ಮೂಲಕ ಸವಿವರವಾಗಿ ವರ್ಧಮಾನ ಚರಿತೆಯಲ್ಲಿ ವಿವರಿಸಿದ್ದಾರೆ. ಪುನರ್ಜನ್ಮಗಳ ಬಗ್ಗೆ ಗಾಢ ನಂಬುಗೆಯನ್ನು ಇರಿಸಿದ್ದು ಕಂಡುಬರುವುದರೊಂದಿಗೆ ಒಂದುಜನ್ಮದ ಪುಣ್ಯ ಸಂಚಿತ ಫಲವು ಮುಂದೊಂದು ಜನ್ಮದಲ್ಲಿ ಸುಖ ಸೌಭಾಗ್ಯವನ್ನು ನೀಡುವುದಾದರೆ ದುಷರ್ಮದ ದುಷ್ಫಲರೀತ್ಯ ಹೀನ ಜಂತುಗಳ ಅವಸ್ಥೆಯು ಉಂಟಾಗುವುದನ್ನು ತಿಳಿಸಿದ್ದಾರೆ. ಅದರೊಂದಿಗೆ ವರ್ಣನೆಗೆ ಮಹತ್ತ್ವಿಕೆಯನ್ನು ನೀಡಿರುವ ಬಗ್ಗೆ ಉಲ್ಲೇಖಿಸಿದ್ದರೂ ಅಂತಹಾ ವರ್ಣನ ಕೌಶಲ್ಯವುಕೆಲವೇ ಸಂದರ್ಭಗಳಲ್ಲಿ ಕಂಡು ಬರುತ್ತದೆ. ಪ್ರಾಯಶಃ ಪ್ರಾಪಂಚಿಕರಿಗೆ ತಾನು ಕೊಡಬೇಕಾದ ಸಂದೇಶದ ಬಗ್ಗೆ ಪೂರ್ವನಿರ್ಧಾರವನ್ನು ತಳೆದ ಕವಯತ್ರಿಯು ಆ ಸಾಧನೆಯನ್ನು ಉತ್ತರಿಸುವಲ್ಲಿ ಹದಗೆಡುತ್ತಿರುವ ತನ್ನ ಆರೋಗ್ಯದ ಬಗ್ಗೆ ಶಂಖಿಸಿ ವೇಗವಾಗಿ ಆ ಕೃತಿಯನ್ನು ಮುಗಿಸುವ ಯತ್ನದಲ್ಲಿ ಮುಖ್ಯ ವಿಚಾರದತ್ತಲೇ ಗಮನಹರಿಸಿ ವರ್ಣನೆಯ ವಿಚಾರದಲ್ಲಿ ಸಂಕ್ಷಿಪ್ತ ರೀತಿಯನ್ನೆ ಅನುಸರಿಸರಲೂ ಬಹುದು. ಆದರೂ ತನ್ನ ಕಲ್ಪನೆಯ ಕುಂಚದಿಂದ ಮೂಡಿ ಬಂದ ಮದುಮಗಳ ಅಲಂಕಾರ ಹಾಗೂ ದಿಬ್ಬಣ, ಚಕ್ರೇಶ್ವರನ ವ್ಯಕ್ತಿತ್ವ ಹಾಗೂ ಸಮರ ಸಂಧಾನ ಇವುಗಳನ್ನು ಓದಿದಾಗ ಇದರಲ್ಲಿರುವ ವರ್ಣನಾ ಕೌಶಲ್ಯವು ಮೆಚ್ಚುಗೆಗೆ ಪಾತ್ರವಾಗುತ್ತದೆ.

ವನಜಲೋಚನೆ ಸ್ವಯಂಪ್ರಭೆಯ ಸಿಂಗರಿಸಲು | ಅನುವಾಗಿ ದಾದಿಯ ನೆರೆದು ||
ಕನಕಕಾಂತಿಯನುಳ್ಳ ತನುವಿಗೆ ಚಂದನ | ವನು ಲೇಪಿಸಿದರು ಕಮ್ಮನಲು || ೧೮೧ ||

ಮಂಡೆಯ ಬಾಚಿ ಮುತ್ತಿನ ಬೈತಲೆಯ ಜಡೆ | ಗೊಂಡೆ ರಾಗಟೆಗಳ ತೊಡಿಸಿ ||
ದುಂಡು ಮಲ್ಲಿಗೆ ಜಾಜಿ ಸಂಪಗೆಗಳ ಚೆಲ್ವ | ದಂಡೆಗಳನು ಮುಡಿಸಿದರು || ೧೮೩ ||

ರತ್ನ ಕಂಠಿಕೆ ಚಂದ್ರಹಾರ ಶೋಭಿತ ಸಣ್ಣ | ಮುತ್ತಿನ ಕಟ್ಟಾಣಿ ಸರವ ||
ಉತ್ತಮ ಮರಕತ ಹೀರ ಮಾಣಿಕಗಳ | ಕೆತ್ತಿದ ಪದಕವ ತೊಡಿಸಿ || ೧೮೪ ||

ಗಜದ ಸೊಂಡಿಲ ಪೋಲ್ವ ನಳಿತೋಳುಗಳಿಗೆ ಅಂ | ಬು ಜನೇತ್ರೆಯರು ಚಕಚಕಿಪ ||
ಭುಜದ ಕೀರ್ತಿಪಂಕಿನಾಗರ ಮುರುಗೆಯನಿಟ್ಟು | ಭುಜಗವೇಣಿಯು ಕರಗಳಿಗೆ || ೧೮೫ ||

ಮುತ್ತಿನ ಚಳಕಿ ಪಚ್ಚೆಯ ಕಡಗವುದುಂದು | ಮತ್ತೆ ಹಿಂಬಳೆ ಕರಿಬಳೆಯು ||
ಉತ್ತಮ ಪದ್ಮರಾಗದ ಕಂಕಣಗಳಚೆ | ಲ್ವೆತ್ತಿಂದ್ರ ನೀಲದುಂಗುರುವ || ೧೮೬ ||

ಅಂಗುಲಿಗಿರಿಸಿ ಕಾಲ್ಕಡಗ ಪೈಜಣೆಯ ಕಾ | ಲುಂಗುರ ಪಿಲ್ಲಿ ಮೆಂಟಿಕೆಯ ||
ಹೆಂಗಳರನ್ನೆ ಸ್ವಯಂ ಪ್ರಭೆಯಂಗವ | ಸಿಂಗರಿಸಿದ ರೂಪ್ಪುವ ಂತೆ || ೧೮೭ ||

ಒಡನೆ ದಿವ್ಯಾಂಬರ ತೊಡಿಸಿ ಕಂಚುಕವನು | ಬಡನಡುವಿಗೆ ಥಳಥಳಿಪ ||
ತೊಡವು ರನ್ನದೊಡ್ಯಾಣ ಕಾಂಚಿಯಧಾಮ | ಮಡದಿಯರಳವಡಿಸಿದರು || ೧೮೮ ||

ಎಸೆವಂತೆ ತಿದ್ದಿ ಕುಂಕುಮವಿಟ್ಟು ಕಂಗಳಿ | ಗೆಸೆವ ಕಜ್ಜಲವ ಹಚ್ಚಿದರು ||
ನಸುನಗುತಲಿ ಕನ್ನೆಗಳಿಗರಿಸಿದ ಪೂಸಿ | ಹಸನಾಗಿ ಸಿಂಗರಿಸಿದರು || ೧೮೯ ||

ಮೂರನೇ ಸಂಧಿಯಲ್ಲಿ ಸ್ವಯಂ ಪ್ರಭೆಯನ್ನು ಮದುಮಗಳಂತೆ ಶೃಂಗರಿಸುತ್ತಾ ಹೀಗೆ ವರ್ಣಿಸಿದ್ದಾರೆ, ಬಂಗಾರ ವರ್ಣದ ಕಾಂತಿಯನ್ನು ಬಿಂಬಿಸುವ ಶರೀರದ ಸೊಬಗನ್ನು ಇಮ್ಮಡಿಗೊಳಿಸಲೋ ಎಂಬಂತೆ ಚಂದನವನ್ನು ಅರೆದು ಶರೀರಾದ್ಯಂತ ಲೇಪಿಸುತ್ತಾರೆ. ಕಾಳಾಹಿವೇಣಿಯ ತಲೆ ಕೂದಲನ್ನು ಬಾಚಿ ಸೊಗಸಾಗಿ ಜಡೆಯನ್ನು ಹೆಣೆದು ಮುತ್ತಿನ ಬೈತಲೆಯನ್ನು ಅಂದವಾದ ಶಿರೋಲಂಕಾರವನ್ನು ಮಾಡುತ್ತಾರೆ. ಅಲ್ಲದೆ ಉತ್ತಮ ಜಾತಿಯ ಪುಷ್ಪಗಳನ್ನು ಆರಿಸಿ ಮುಡಿಸುವುದರೊಂದಿಗೆ ಕೇಶ ಸಂಪತ್ತನ್ನು ಹೆಚ್ಚಿಸುತ್ತಾರೆ.

ನಾಜೂಕಿನಿಂದ ತಯಾರಿಸಲ್ಪಟ್ಟ ಕರ್ಣಾಭರಣಗಳನ್ನು, ತೊಡಿಸಿ, ಮಾಣಿಕ್ಯದ ಮೂಗುತಿಯನ್ನು ಇಡುತ್ತಾರೆ, ಬಲಮುರಿ ಶಂಖದಂತಿರುವ ಕಂಠಕ್ಕೆ, ಕಂಠದ ಶೋಭೆಯನ್ನು ಹೆಚ್ಚಿಸಲು, ಬಂದಿಸರಿಗೆ ಎಂಬ ಕಂಠಾಭರಣವನ್ನು ತೊಡಿಸುತ್ತಾರೆ. ಅಲ್ಲದೆ, ರತ್ನ ಕಂಠಿ, ಚಂದ್ರಹಾರ, ಮುತ್ತಿನ ಕಟ್ಟಾಣಿ ಸರ ಮತ್ತು ನವರತ್ನ ಖಚಿತ ಪದಕವನ್ನು ಹೊಂದಿದ ಹಾರವನ್ನು ತೊಡಿಸುತ್ತಾರೆ.

ಆನೆಯ ಸೊಂಡಿಲಿನಂತೆ ಶೋಭಿಸುವ ಬಾಹುದ್ವಯಂಗಳಿಗೆ ವಂಕಿ ನಾಗರ ಮುರುಗೆಯಿಂದೂ ಪ್ಪುವ ಭುಜ ಕೀರ್ತಿಯನ್ನು ತೊಡಿಸುತ್ತಾರೆ. ಎರಡೂ ಕೈಗಳ ತುಂಬ ಮುತ್ತನ್ನು ಹೊಂದಿರುವ ಪಚ್ಚೆಯ ಕಡಗ, ಕೆಂಬಳೆ, ಮತ್ತು ಕರಿಬಳೆ ತೊಡಿಸಿ ಇಂದ್ರನೀಲ ಮಣಿಯಿಂದ ಶೋಭಿಸುವ ಅಂಗುಲಿಕವನ್ನು ಬೆರಳುಗಳಿಗೆ ತೊಡಿಸಿ ಶೃಂಗರಿಸುತ್ತಾರೆ. ಕಾಲ್ಕಡಗ, ಕಾಲಂದುಗೆ, ಕಾಲುಂಗುರ ಮುಂತಾದ ಆಭರಣಗಳನ್ನು ತೊಡಿಸಿ ಆ ಸ್ವಯಂ ಪ್ರಭೆಯ ದೇಹ ಕಾಂತಿಗೆ ಒಪ್ಪುವ ದಿವ್ಯದುಕೂಲ ನಿರ್ಮಿಸಿದ ವಸನವನ್ನು ಉಡಿಸುತ್ತಾರೆ. ಆದಕೊಪ್ಪುವ ಕಂಚುಕವನ್ನು ತೊಡಿಸಿ, ಸೊಬಗು ಮೂರ್ಮಡಿಗೊಳ್ಳುವಂತೆ ಕಟೀ ಭಾಗಕ್ಕೆ ಸುಂದರವಾದ ರನ್ನದ ಒಡ್ಯಾಣ ಹಾಗೂ ಕಾಂಚೀ ಧಾಮ ಎಂಬ ಆಭರಣವನ್ನು ತೊಡಿಸುತ್ತಾರೆ. ಮುಖದ ಶೋಭೆಯನ್ನು ಹೆಚ್ಚಿಸುವ ಸಲುವಾಗಿ ಸುಂದರವಾದ ಕುಂಕುಮದ ಬೊಟ್ಟನ್ನು ಇರಿಸಿ ಕೆನ್ನೆಗೆ ಅರಸಿನವನ್ನು ಹಚ್ಚುತ್ತಾರೆ. ಕಂಗಳಿಗೆ ಕಪ್ಪನೆಯ ಕಾಡಿಗೆಯನ್ನು ಹಚ್ಚಿ,

ಕಣ್ಣಿನ ಚೆಲುವ ಇಮ್ಮಡಿಯಾಗುವಂತೆ ಮಾಡುತ್ತಾರೆ. ಈ ರೀತಿಯಾಗಿ ಒಂದು ಮದುಮಗಳ ಶೃಂಗಾರ ವರ್ಣನೆಯಿಂದ ತಮ್ಮ ಶೃಂಗಾರ ಮನೋಭಾವವನ್ನು ಮೆರೆದ ಕವಯತ್ರಿಯು ಮುಂದೆ ದಿಬ್ಬಣ ಸಾಗುವಾಗಲೂ ತಮ್ಮ ವರ್ಣನೆಯನ್ನುಮುಂದುವರಿಸುತ್ತಾ.

ಮೊಳಗುವ ಮಂಗಲವಾದ್ಯ ಭೇರಿಯ ರವ | ಉರಿಯುವ ಶುಭ ಶೋಭಾನಗಳಿಂ ||
ನಲವೇರಿ ನವವಧುವನು ಕರೆತರುತಿರ್ದ | ಬಲುಸಂಭ್ರಮದಿ ಖಚರೇಶ || ೯೨ ||

ವೀಣೆ ತಂಬೂರಿ ಮೃದಂಗ ಕೊಳಲು ತಾಳ | ಜಾಣೆಯರೊಲಿದು ಬಾಜಿಸುತ ||
ಗಾನವ ಪಾಡಿ ನರ್ತಿಸುತಲೈ ತರುತಿರೆ | ಬಾನಚರರ ಬಾಲಕಿಯರು || ೯೩ ||

ಕಲಶ ಕನ್ನಡಿವಿಡಿದೋರ್ವಬಾಲೆಯು | ಮುಂದೆ ಕಲಹಂಸೆಯಂದದಿ ನಡೆಯೆ ||
ಕೆಲವು ಬಾಲೆಯರು ಮಂಗಲಗಾನಗಳನು ಕೋ | ಕಿಲ ಕಂಠದಲಿ ಪಾಡುತ್ತೈದೇ || ೯೪ ||

ಹಲವಾರು ಸಂಚಿ ಕಾಳಂಚಿ ಹಡಪಗಿಂಡಿ | ನಲವಿನಂ ಪಿಡಿದು ಮುಂದರಿಯೇ ||
ಪೊಳೆವ ಲಾವಂಚ ಬಿಜ್ಜಣಿಗೆಯವಿಡಿದೋರ್ವ | ಚೆಲುವೆ ಗಾಳಿಯ ಬೀಸುತ್ತೈದೇ || ೯೫ ||

ಬಡನಡು ಬಳಕುತ ಕೊಡೆಯನು ಪಿಡಿದೋರ್ವ | ಬೆಡಗಿನ ದಾದಿಯ್ಯೆತರಲು ||
ಅಡಿಗಡಿಗೆಲೆಯಡಿಕೆಯ ನೀಡುತೋರ್ವಳು | ನಡೆಯುತ್ತಿದ್ದಳು ನಲ್ಮೆಯಿಂದ || ೯೬ ||

ಮಂಗಲ ವಾದ್ಯಗಳು ಮೊಳಗುತ್ತಿದ್ದಂತೆ ಖಚರೇಂದ್ರನು ತನ್ನ ಮಗಳನ್ನು ವೈಭವದಿಂದ ಧಾರಾಮಂಟಪಕ್ಕೆ ಕರೆ ತರುತ್ತಾನೆ. ವೀಣೆ, ತಂಬುರಿ, ಮೃದಂಗ, ಕೊಳಲು, ತಾಳ ಮುಂತಾದ ವಾದ್ಯಗಳ ಘೋಷದೊಂದಿಗೆ ಗಂಧರ್ವ ಕನ್ಯೆಯರು ದಿಬ್ಬಣದ ಮುಂಚೂಣಿಯಲ್ಲಿ ನರ್ತಿಸುತ್ತಾ ಸಾಗುತ್ತಾರೆ. ಅವರ ಹಿಂದೆ ಕಲಶ ಕನ್ನಡಿಯನ್ನು ಹಿಡಿದ ಬಾಲಿಕೆಯೋರ್ವಳು ಕಲ ಹಂಸದಂತೆ ಸಾಗುತ್ತಿದ್ದರೆ, ಕೆಲವು ಗಂಧರ್ವ ಬಾಲೆಯರು ಕೋಕಿಲ ಕಂಠದಲ್ಲಿ ಸುಶ್ರಾವ್ಯ ಗಾನವನ್ನು ಪಾಡುತ್ತ ಅವಳನ್ನು ಹಿಂಬಾಲಿಸುತ್ತಾರೆ. ಮಂಗಳ ಸೂಚಕವಾದ ತುಂಬು ಕಲಶವನ್ನು ತಮ್ಮ ಕೈಗಳಲ್ಲಿ ಹಿಡಿದ ಸುದತಿಯರು ಮುಂದೆ ಸಾಗುತ್ತಿದ್ದಂತೆ, ಬೀಸಣಿಕೆಯನ್ನು ಬೀಸುತ್ತ ಎಡಬಲಗಳಲ್ಲಿ ಚೆಲುವೆಯರೀರ್ವರು ಸಾಗುತ್ತಾರೆ. ಮದುವಣಗಿತ್ತಿಯಾದ ಸ್ವಯಂ ಪ್ರಭೆಗೆ ಬಿಸಿಲಿನ ಬೇಗೆ ಉಂಟಾಗದಂತೆ ಸುಂದರಿಯೋರ್ವಳು ಸತ್ತಿಗೆಯನ್ನು ಹಿಡದು ಸಾಗುತ್ತಿದ್ದಂತೆ, ಸುಂಗಧ ಪೂರಿತ ವೀಳೆಯವನ್ನು ಮಡಿಸಿ ಇನ್ನೊಬ್ಬ ಪರಿಚಾರಕೆಯು ನೀಡುತ್ತಾ ನಡೆಯುತ್ತಾಳೆ. ಈ ರೀತಿಯಾಗಿ ಸರ್ವಸಾಲಂಕೃತಳಾದ ಸ್ವಯಂ ಪ್ರತಿಭೆಯನ್ನು ಮದುವೆ ಮಂಟಪಕ್ಕೆ ಕರೆ ತರಲು

ಸೌಂದರ್ಯವನ್ನು ವರ್ಣಿಸಿದ ಕವಯತ್ರಿಯು ತನ್ನ ವರ್ಣನಾ ಕೌಶಲ್ಯವನ್ನು ಮುಂದುವರೆಸುತ್ತಾ ಗಂಭೀರ ಪ್ರಕರಣದತ್ತಲೂ ಸಾಹಸವನ್ನು ತೋರಿದ್ದಾರೆ.

ತೊಟ್ಟರುಕ್ಕಿನ ಕವಚವ ವೀರಕಾಶೆಯ | ಕಟ್ಟಿ ಶಿರಸ್ತ್ರಾಣಧರಿಸಿ ||
ಕಟ್ಟಾಳುಗಳನು ವೀರ ಶೃಂಗಾರದಿಂದಳ | ವಟ್ಟರೇನೆಂಬೆ ಸಂಭ್ರಮದಿಂದ || ೩೯ ||

ಬಡಿಗೆ ಬಾಳ್ಬಿಲ್ಲಂಬು ಕೊಡಲಿಗಳಾದಿಯ | ಪಿಡಿದ ಪಾಯ್ದಳದ ಗುಂಪುಗಳು ||
ಗೊಡಗೊಂಡು ಪಡೆವಳರ್ಸಡಗರದಿಂದಲಿ | ನಡೆದರು ರಾಜ ಸನ್ನಿಧಿಗೆ || ೪೦ ||

ಪಳಗಿದಾನೆಗಳ ಮೇಲಂಬಾರಿಗಳ ನೆಲೆ | ಗೊಳಿಸುತ ಚತುರ ಮಾವುತರು ||
ಪೊಳೆಯುವ ಶಸ್ತ್ರಾಸ್ತ್ರಗಳ ತುಂಬಿ ಧ್ವಜಗಳ | ನಳವಡಿಸಿದರೋಜೆಯಿಂದ || ೪೧ ||

ಬೆಟ್ಟದಿಂದುರುಳಿ ಬಂಡೆಗಳು ಬಪ್ಪಂತೆ ಘೀ | ಳಿಟ್ಟು ನಡೆವ ಗಜಘಟೆಯ ||
ತಟ್ಟನೆ ಸೇನಾಶರಧಿಗೆ ಸೇತುವೆ | ಗಟ್ಟಿಹುದೆನಲುರಾಜಿಸಿತು || ೪೪ ||

ಸಮ್ಮುಕ ಕೈ ತಂದ ಚತುರಂಗ ಬಲವನು ಸ | ಮ್ಮುದದಿಂದಲೀಕ್ಷಿಸುತ ||
ಸುಮ್ಮಾನದಲಿ ರಣವೀಳ್ಯವಿತ್ತೆಲರ್ಗೇ | ಗಮ್ಮನೇಳುತ ಪ್ರಜಾಪತಿಯು || ೪೬ ||

ಶೃಂಗರಿಸಿದ ಬೆಟ್ಟದಂತೆ ಶೋಭಿಪ ಸರ್ವ | ಮಂಗಲವೆಂಬಾನೆಯೇರಿ ||
ಬೆಂಗಾವಲ ವೀರ ಭಟರ ಸಂದಣಿಗೂಡಿ | ಸಂಗರಾಂಗಣವತ್ತ ನಡೆದ || ೪೩ ||

ಸಮರ ಸಿದ್ಧತೆಯ ವರ್ಣನೆಯನ್ನು ಕಣ್ಣಿಗೆ ಕಟ್ಟುವಂತೆ ಕವಯತ್ರಿಯು ವರ್ಣಿಸಿದ್ದಾರೆ. ಚತುರಂಗ ಬಲವನ್ನು ಪ್ರತ್ಯೇಕ ಪ್ರತ್ಯೇಕವಾಗಿ ವರ್ಣಿಸಿದ್ದಾರೆ. ಕಾಲಾಳುಗಳ ಬಗ್ಗೆ ಈ ರೀತಿ ವಿವರಿಸುತ್ತಾರೆ. ಸಮರವೆಂದರೆ ಸಂತೋಷ ವಿಹಾರ ಎಂದೇ ಪರಿಭಾವಿಸುವ ವೀರರುಗಳು ರಾಜನ ಆಣತಿಯಾದುದೇ ತಡ ಉಕ್ಕಿನ ಕವಚವನ್ನು ತೊಡೆದು ವೀರ ಕಸೆಯನ್ನುಟ್ಟು ಶಿರಸ್ತ್ರಾಣವನ್ನೂ ಧರಿಸಿ ಸಂತೋಷದಿಂದ ಸಮರಾಂಗಣಕ್ಕೆ ಧುಮ್ಮಿಕ್ಕುವ ಸಲುವಾಗಿ ಬಡಿಗೆ, ಬಾಳು, ಬಿಲ್ಲು ಕೊಡಲಿ, ಇತ್ಯಾದಿ ಆಯುಧಗಳನ್ನು ಧರಿಸಿ ಸಂಭ್ರಮದಿಂದ ರಣಕ್ಷೇತ್ರಕ್ಕೆ ಧಾಮಿಸುವರು. ಅಶ್ವಾರೋಹಿಗಳ ಉಲ್ಲಾಸವಂತೂ ಹೇಳ ತೀರದಷ್ಟು ಉತ್ತಮವಾದ ಸಲ್ಲಕ್ಷಣಭರಿತ ಹಯವನ್ನೇರಿದ ಅಶ್ವಾರೋಹಿಗಳು ಕತ್ತಿಯನ್ನು ಜಳಪಿಸುತ್ತ ಮುಂದುವರೆಯುವ ಸನ್ನಿವೇಶವನ್ನು ಕಂಡಾಗ ಅಲ್ಲದೆ ಹಣೆಗಿಟ್ಟಂತಹ

ವೀರ ಸಿಂಧೂರ ನೊಸಲಿಗೆ ಕಟ್ಟಿದ ಬಾಸಿಂಗ ಇದು ವಿಜಯ ವಧುವನ್ನು ವರಿಸ ಹೊರಟ ಮದುವಣಿಗನಂತೆ ವರ್ಣಿಸಿದುದು, ಕವಯತ್ರಿಯ ಗಂಭೀರ ವರ್ಣನೆಗೆ ಸಾಕ್ಷಿಯಾಗಿದೆ.

ಆನೆಯನ್ನೇರಿ ಹೋರಾಡುವ ಸೈನಿಕರು ತುಂಬು ಉಲ್ಲಾಸದಿಂದ ಕಂಗೊಳಿಸುತಲಿರ್ದರು ಸೇನಾ ಸಾಗರವೆಂಬ ಮಹಾಸಾಗರ ಕಟ್ಟೆಯೊಡೆದು ಒಮ್ಮೆಲೆ ಪ್ರವಹಿಸುವಂತೆ ಬೆಟ್ಟದಿಂದ ಹೆಬ್ಬಂಡೆಗಳು ಉರುಳಿ ಬಿದ್ದಂತೆ ಧಾವಿಸುವ ಆನೆಗಳ ಹಿಂಡನ್ನು ವರ್ಣಿಸಿದ ಕವಯತ್ರಿಯು ಆನೆಯ ಬೆನ್ನ ಮೇಲೆ ಕುಳಿತ ವೀರನು ವಿಜಯ ಧ್ವಜವನ್ನು ಹಾರಿಸುತ್ತ ಸಮರ ಕ್ಷೇತ್ರದತ್ತ ಧಾವಿಸುತ್ತಿದ್ದರೆ ರಥಿಕರ ಸಂಭ್ರಮವಂತು ಮೇರೆ ಮೀರಿತ್ತು. ತಮ್ಮ ಧೈರ್ಯ ಶೌರ್ಯಗಳನ್ನು ಬಿಂಬಿಸುವ ಚಿತ್ರಣವನ್ನು ತಾವೇರಿದ ವರೂಥದಲ್ಲಿ ಚಿತ್ರಿಸಿದ ರಥಿಕರು ಪ್ರಾಜ್ಞನಾದ ಸಾರಥಿಯ ಸಾರಥ್ಯದಿಂದಲೂ ಉತ್ತಮಶ್ವಗಳ ಸಹಾಯದಿಂದಲೂ ರಥವನ್ನು ನಡೆಸುತ್ತಾ ಮುಂದೆ ಮುಂದೆ ಬರುತ್ತಿದ್ದು ಎದುರಿಗೆ ವಿರೋಧಿ ಸ್ಥಾನದಲ್ಲಿರುವ ಚತುರಂಗ ಬಲದೊಡನೆ ಕದನಕ್ಕಿಳಿಯುವುದಕ್ಕೆ ಅಪ್ಪಣೆಯನ್ನು ಯಾಚಿಸುವುದಕ್ಕಾಗಿ ತಮ್ಮೊಡೆಯನಲ್ಲಿ ರಣ ವೀಳ್ಯೆಯನ್ನು ಬೇಡುತ್ತಿದ್ದರೆ ಇದೆಲ್ಲವನ್ನೂ ಕಂಡ ಮಹಾರಾಜನು ಚೆನ್ನಾಗಿ ಪಳಗಿಸಿದ ಸಮರಾಂಗಣದಲ್ಲಿ ಧೃತಿಗೆಡದೆ ಅಚಲವಾಗಿ ನಿಲ್ಲಬಲ್ಲ ಸರ್ವಮಂಗಲವೆಂಬ ಆನೆಯನ್ನೇರಿ ರಣಕ್ಷೇತ್ರಕ್ಕೆ ಧಾವಿಸುತ್ತಾನೆ

ಈ ರೀತಿ ಸಮರ ಸಂಧಾನದ ವರ್ಣನೆಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ ಕವಯತ್ರಿಯು ವೀರ ಹಾಗೂ ಶೃಂಗಾರ ಎಂಬ ತೀರ ವೈರುಧ್ಯ ಸನ್ನಿವೇಶವನ್ನು ಸಮರ್ಥವಾಗಿ ನಿರೂಪಿಸಿದನ್ನು ಕಂಡಾಗ ಅವರ ಕವಿತಾ ಪ್ರೌಢಿಮೆಯ ಬಗ್ಗೆ ತಲೆದೂಗಲೇ ಬೇಕು.

ಒಂಬತ್ತನೆಯ ಸಂಧಿಯನ್ನು ಭುವನಹಳ್ಳಿ ಶರ್ಮರು ಅಂತ್ಯಗೊಳಿಸ ಬೇಕಾದ ಕಾರಣ ಅವರು ಕಾವ್ಯವನ್ನು ಈ ರೀತಿಯಲ್ಲಿ ಮುಗಿಸಿದರು.

ಇಂತಿಷ್ಟು ಬರೆವ ವೇಳೆಗೆ ರಾಧಾಮತಿಗತಿ | ಸಂತತ ಕಷ್ಟವು ಹೆಚ್ಚಿ ||

ಅಂತಕ ಮೃತ್ಯುವು ಬಂದೊದಗಿದುದು ಏ | ನೆಂತು ಪೇಳುವುದು ಸಂಸಾರ ಸ್ಥಿತಿಯಾ || ೬೦ ||

ಮುಂದಿನ ಕಾವ್ಯದ ಬರೆಗನು ಕವಿ ಕರ್ಮ | ನೆಂಬುವ ಪದುಮನಾಭ ||

ಬಂಧು ಮಿತ್ರಾದಿ ಧರ್ಮಿಯರೆಲ್ಲರ | ಸಂದಪೇಕ್ಷೆಯನಾಂತು || ೬೧ ||

ಹತ್ತನೆಯ ಸಂಧಿಯನ್ನು ಮಧ್ಯಂತರ ಸಂಧಿಯೆಂದು ಕರೆದು, ಕಾವ್ಯ ಪೂರ್ಣಗೊಳಿಸುವ ಬಗ್ಗೆಈ ರೀತಿ ವ್ಯಕ್ತಪಡಿಸಿದ್ದಾರೆ.

ಈ ಕಾವ್ಯವನ್ನು ಪೂರ್ಣಗೊಳಿಸುವ ಶಕುತಿಯ | ನಾಕಾಧಿದೇವತೆಯಾಗೀ

ಶೋಕವ ನಶಿಸಿ ಸಂತುಷ್ಟಿಯಿಯ | ಲಾಕೆ ಸಿಂಹನಗದ್ದೆಯಲೀ

ಎಂದ ಇವರು ನೆಲ್ಲಿಕಾರಿನ ಮಹಿಳೆ ರಾಧಮತಿಯವರ ಹುಟ್ಟಿನಿಂದ, ಸಾವಿನವರೆಗಿನ ಬದುಕಿನ ಚಿತ್ರಣ, ಅವರ ಸಂಸಾರ ಪತಿ , ಮಕ್ಕಳು ಬರೆದ ಸಾಹಿತ್ಯವೆಲ್ಲದರ ಉಲ್ಲೇಖವನ್ನು ೧೦ನೆಯ ಸಂಧಿಯ ೩೪ ಪದ್ಯದಿಂದ ೫೪ನೇ ಪದ್ಯದಲ್ಲಿ ಅಂದರೆ ಸುಮಾರು ೨೧ ಪದ್ಯದಲ್ಲಿ ಸಂಕ್ಷಿಪ್ತವಾಗಿ ವಿವರಿಸಿ ವರ್ಧಮಾನ ಚರಿತೆ ಕಾವ್ಯವನ್ನು

ಮುಂದುವರಿಸಿದ್ದಾರೆ. ( ಜೈನ ಮಹಿಳೆ ರಾಧಮ್ಮ ಬದುಕು - ಈ ಭಾಗದಲ್ಲಿ ಕೊಡಲಾಗಿದೆ. ) ತನಗೆ ಈ ಪದ್ಯವನ್ನು ಬರೆಯಲು ಹೇಳಿದ ಧರ್ಮಸ್ಥಳದ ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆ ಅವರ ತಾಯಿ ರತ್ನಮ್ಮ ನವರ ಉಲ್ಲೇಖವನ್ನು ಸುಮಾರು ನಾಲ್ಕೈದು ಪದ್ಯಗಳಲ್ಲಿ ಹೇಳಿದ್ದಾರೆ.

ಪೂಜಿಸಿ ತಕ್ಷೇತ್ರದಧಿಕಾರಿ ವೀರೇಂದ್ರ | ರಾಜಿತ ಹೆಗ್ಗಡೆಯವರು ||
ಓಜೆಯಿಂ ಮಾತೃಶ್ರೀ ರತ್ನಮ್ಮ ರೊಡಗೂಡಿ | ಭ್ರಾಜಿಪ ಸತ್ಕಾವ್ಯನಿದನು || ೨೪ ||

ಶ್ರೀ ಧರ್ಮಸ್ಥಳಕ್ಷೇತ್ರ ಮಾತೃಶ್ರೀಯವರಾದ | ಸಾಧ್ವಿ ಶ್ರೀ ರತ್ನಮ್ಮನವರ ||
ಸಾಧಿತನೇತೃತ್ವದೊಳು ಕಬ್ಬವಾರಂಭ | ವಾದುದು ಹರ್ಷವದಲ್ತೇ || ೨೭ ||

ಮುಂದೆ ಹನ್ನೊಂದನೆಯ ಸಂಧಿಯಲ್ಲಿ ವರ್ಧಮಾನರ ವೈರಾಗ್ಯ ಪ್ರಾಪ್ತಿ, ವರ್ಧಮಾನರ ಮೇಲೆ ರುದ್ರದಂಪತಿಗಳ ಘೋರೋಪಸರ್ಗ ( ವರ್ಧಮಾನರನ್ನು ಪರೀಕ್ಷಿಸುವ ಬಗ್ಗೆ), ಸುಂದರಳಾದ ಚಂದನ ಬಾಲೆ ಅನುಭವಿಸಿದ ಅನೇಕ ಕಷ್ಟ ಕೋಟಲೆಗಳಿಂದ ಕೊನೆಗೆ ವೈರಾಗ್ಯ ಹೊಂದಿ ಆರ್ಯಿಕೆಯಾಗುವ ವೃತ್ತಾಂತ, ಕೇವಲಜ್ಞಾನ ಪ್ರಾಪ್ತಿ, ವರ್ಧಮಾನರ ತತ್ವಗಳ ಭೋದನೆ, ಕರ್ಮಗಳು ಮತ್ತು ಅದರ ಫಲಗಳು ಕೊನೆಗೆ ಯೋಕ್ಷ ಕಲ್ಯಾಣವನ್ನು ಬರೆದು ವರ್ಧಮಾನ ಚರಿತ ಕಾವ್ಯವನ್ನು ಭುವನ ಹಳ್ಳಿ ಶರ್ಮ ಪೂರ್ಣಗೊಳಿಸುವರು. ಈ ವಿಚಾರಗಳನ್ನು ಒಳಗೊಂಡ ವರ್ಧಮಾನ ಚರಿತೆಯನ್ನು 'ಕಾವ್ಯವೆಂದು ಮಾತ್ರವೇ ಅಲ್ಲ 'ಶಾಸ್ತ್ರ' ವೆಂದೂ ಹೇಳಿ ಗೌರವಿಸಬಹುದು ಜೈನ ಧರ್ಮ ತತ್ವಗಳನ್ನು ತಿಳಿಸುವ ತಿಳಿಗನ್ನಡದ ಆಗಮ ಗ್ರಂಥವೆನ್ನುವುದರಲ್ಲಿಯೂ ಆತಿಶಯವೇನು ಇಲ್ಲ' ಎಂದು ಜಿ. ಹೆಚ್ ಆದಿರಾಜಯ್ಯನವರು ಹೇಳಿದ್ದಾರೆ.

ಟಿಪ್ಪಣಿಗಳು|:

೧. ವೈ ಉಮಾನಾಥ ಶೆಣೈ, ಕನ್ನಡ ಸಾಹಿತ್ಯಕ್ಕೆ ಮೂಡಬಿದ್ರೆಯ ಕೊಡುಗೆ, ಪುಟ ೧೧೬.

೨. ಅದೇ, ಪುಟ ೧೧೭.

೩. ಅದೇ, ಪುಟ ೧೧೮.

೪. ಕಮಲಾ ಹಂಪನಾ, ಬೊಗಸೆ, ಪುಟ ೨೨೯.

೫. ಬಿ. ದೇವಕುಮಾರ್ ಜೈನ್, ಅರ್ಚನಾಷ್ಟಕ, ಜೀವನ ಪರಿಚಯ.

೬. ಅದೇ, ಜೀವನ ಪರಿಚಯ.

೭. ಗೋವಿಂದ ಪೈ, ವಾಙ್ಮಯ ದರ್ಶನ, ಪು ೧೧೯೪.

೮. ಡಿ. ಪುಟ್ಟಸ್ವಾಮಿ, ಸಂಗೀತ ಪೂಜಾ ಸಂಗ್ರಹ, ಮುನ್ನುಡಿ.

೯. ಮೂಡಾರು ಧರ್ಮಪಾಲ ಇಂದ್ರ, ಸಂಗೀತ ಪೂಜಾ ಸಂಗ್ರಹ, ಸಂಪಾದಕೀಯ.

೧೦. ಅದೇ, ಸಂಪಾದಕೀಯ.

೧೧.ಅದೇ, ಸಂಪಾದಕೀಯ.

೧೨. ವೈ ಉಮಾನಾಥ ಶೆಣೈ, ಕನ್ನಡ ಸಾಹಿತ್ಯಕ್ಕೆ ಮೂಡಬಿದ್ರೆಯ ಕೊಡುಗೆ, ಪುಟ ೧೧೮.

೧೩. ಡಿ. ಪದ್ಮನಾಭ ಶರ್ಮ ವರ್ಧಮಾನ ಚರಿತೆ, ಮುನ್ನುಡಿ. iii

೧೪. ಜಿ.ಎಚ್. ಆದಿರಾಜಯ್ಯ ವರ್ಧಮಾನ ಚರಿತೆ, ಮುನ್ನುಡಿ, ಪುಟ ix

೧೫. ಅದೇ, ಪುಟ xii

೧೬. ಮೂಡಾರು ಧರ್ಮಪಾಲ ಇಂದ್ರ ವರ್ಧಮಾನ ಚರಿತೆ, ಪುಟ ೨೬.

೧೭. ಅದೇ, ಪುಟ ೨೬.

೧೮. ಅದೇ, ಪುಟ ೨೭.

## ೬. ಉಪ ಸಂಹಾರ

ಯಾವುದೇ ಪ್ರೋತ್ಸಾಹಗಳು ದುರ್ಲಭವಾಗಿರುವ ಕಾಲಘಟ್ಟದಲ್ಲಿ ಸಿಕ್ಕಿದ ಅವಕಾಶವನ್ನೇ ಉಪಯೋಗಿಸಿಕೊಂಡು ಅವಿರತ ದುಡಿಮೆಯ ಸಂದರ್ಭದಲ್ಲೂ ಸಮಯವನ್ನುಳಿಸಿಕೊಂಡು ತನ್ನ ಮತಿಗೆ ತೋರಿದ್ದನ್ನು ಕ್ಷಿತಿಯೆ ಜನರಿಗೆ ತಿಳಿಸುವ ಹಠವನ್ನು ಕವಯತ್ರಿ ಹೊಂದಿರುವಂತೆ ಕಾಣುತ್ತದೆ. ಮನೆಯಲ್ಲಿನ ಬಡತನಗಳೇನಿದ್ದರು ತನ್ನ ಅಪಾರಜ್ಞಾನವೆಂಬ ಸಿರಿತನವನ್ನು ಹೊಂದಿದ ರಾಧಮ್ಮ ಆ ಜ್ಞಾನದ ಬೆಳಕನ್ನು ತನ್ನದೇ ಆದ ಮಾಧ್ಯಮದಲ್ಲಿ ಓದುಗರೆದುರು ತೆರೆದಿಟ್ಟಿದ್ದಾರೆ. ತನ್ನ ಅನುಭವದ ಮಿತಿಯನ್ನು ಅವಲಂಬಿಸಿ ಬರೆದಿಟ್ಟುಕೊಂಡು ಮತ್ತೆ ಅದರಲ್ಲಿ ಸತ್ತ್ವವನ್ನೆರೆದು ಗ್ರಂಥರೂಪವನ್ನಾಗಿ ಪರಿವರ್ತಿಸಿರುವುದನ್ನೂ ನಾವು ಕಾಣಬಹುದು. ಸದ್ಧರ್ಮ ಮತ್ತು ಆಚರಣೆಯಲ್ಲಿ ಅಪಾರ ನಂಬುಗೆಯನ್ನಿಟ್ಟಿರುವ ಈಕೆ ದೈವಭಕ್ತೆಯಾಗಿಯೂ ನಮ್ಮೆದುರು ಕಾಣಸಿಕೊಳ್ಳುತ್ತಾರೆ. ಮಾನವ ಜನ್ಮವನ್ನು ಅಧಃ ಪತನಕ್ಕೆ ತಳ್ಳುವ ದುಷ್ಕರ್ಮದ ಬಗ್ಗೆ ಎಚ್ಚರಿಕೆಯನ್ನು ನೀಡುತ್ತ ಅದಕ್ಕೆ ಕಾರಣವಾದ ಕಾಮ, ಕ್ರೋಧಾದಿಗಳನ್ನು ನಿಗ್ರಹಿಸಿಕೊಳ್ಳುವ ಬಗ್ಗೆ ಅಡಿಗಡಿಗೆ ಹಿತ ಭೋದನೆಯನ್ನು ನೀಡುತ್ತಾ ಬಂದಿರುವುದು. ಇವರು ರಚಿಸಿದ ಎಲ್ಲಾ ಗ್ರಂಥಗಳಲ್ಲೂ ಕಾಣಲು ಸಾಧ್ಯವಿದೆ. ತನ್ನ ಈ ಹಿತೋಕ್ತಿಯನ್ನು ಉದಾಹರಣೆಗಳೊಂದಿಗೆ ವಿಸ್ತರಿಸಿದ ಈಕೆ ಹಲವಾರು ಪಾತ್ರಗಳನ್ನು ಸೃಷ್ಟಿಸಿ ಆ ಪಾತ್ರಗಳ ಅನುಭವಜನ್ಯ ಮಾತುಗಳನ್ನೇ ಚಿತ್ತರಿಸಿ ಸಾಮಾಜಿಕರಲ್ಲಿ ಜಾಗೃತಿಯನ್ನು ಸಾರುವ ಪ್ರಯತ್ನ ಮಾಡಿದ್ದಾರೆ . ಗಾಂಧೀಜಿಯವರಂತ ಅಹಿಂಸಾ ವಾದಿಗಳ ಆದರ್ಶವನ್ನು ಇವರು ಹೊಂದಿದ್ದಾರೆ ಎನ್ನುವುದು ಸೂಚ್ಯವಾಗಿ ಅವರ ಕೆಲವು ಪದ್ಯಗಳಲ್ಲಿ ನಾವು ಕಾಣಬಹುದು.

ಸ್ತ್ರೀ ಸಬಲೀ ಕರುಣವನ್ನು ಆ ಕಾಲದಲ್ಲೇ ಬೆಂಬಲಿಸಿದ ರಾಧಮ್ಮ ಸಚ್ಚರಿತತೆಯಜೀವನ ಕ್ರಮವನ್ನು ಮುಕ್ತಿ ಪಥವನ್ನು ಸೇರಿ ಮನುಷ್ಯ ಧರ್ಮವನ್ನು ಸಾರ್ಥಕಗೊಳಿಸುವ ರೀತಿಯನ್ನು ತನ್ನದೇ ಆದ ಶೈಲಿಯಲ್ಲಿ ವಿವರಿಸುತ್ತಾರೆ. ಮುಂದೊಂದು ಕಾಲಘಟ್ಟದಲ್ಲಿ ಮಾಯವಾಗಬಹುದಾದ ಧಾರ್ಮಿಕ ಆಚರಣೆಗಳು ತನ್ನ ಜೀವಂತಿಕೆ ಕಳೆದುಹೋದರೂ ತನ್ನ ಕೃತಿಯಲ್ಲಿ ಅವು ಸೇರ್ಪಡೆಗೊಂಡು ಅಮರವಾಗಿರಲಿ ತನ್ಮೂಲಕ ಜನತೆ ಈ ಪವಿತ್ರ ಪರಂಪರೆಯನ್ನು ತಿಳಿದುಕೊಳ್ಳಲಿ ಎಂಬ ಉದ್ದೇಶವನ್ನು ಹೊಂದಿದ್ದಾರೆ.

ಜನಪದೀಯರ ಮತಿಗೆ ಸುಲಭ ಗ್ರಾಹ್ಯವಾಗುವ ನೆಲೆಯಲ್ಲಿ ಅರ್ಥವಾಗಲು ಕ್ಲಿಷ್ಟವಾಗಿದ್ದ ಹಲವಾರು ವಿಚಾರಗಳನ್ನು ಸುಲಭ ಸಾಧ್ಯವಾದ ಷಟ್ಪದಿ, ಸಾಂಗತ್ಯ, ಚತುಷ್ಪದಿಗಳೇ ಮುಂತಾದ ಛಂದೋರೂಪದಲ್ಲಿ ವಿವರಿಸುತ್ತಾ ಜನ ಸಾಮಾನ್ಯರಿಗೆ ಅರ್ಥವಾಗುವ ಶಬ್ದಗಳನ್ನೇ ಪ್ರಯೋಗಿಸಿದುದರ ಉದ್ದೇಶ ಜನ ಜಾಗೃತಿಯನ್ನು ಉಂಟು ಮಾಡುವುದೇ ಆಗಿದೆ.

ಅಂದಿನ ಕಾಲದಲ್ಲಿ ಪ್ರಸಿದ್ಧವಾಗಿದ್ದ ಭಜನೆಯ ಹಾಡುಗಳನ್ನು ಅನುಸರಿಸಿ, ಪದ್ಯ ರಚನೆಯನ್ನು ಮಾಡಿ, ಆ ಮೂಲಕ ತನ್ನ ಭಾವನೆಯನ್ನು ಅದರಲ್ಲಿ ಒಪ್ಪಿಸಿ ಜನಪ್ರಿಯವಾಗುವಂತೆ ಮಾಡಿದ್ದಾರೆ. ತನ್ನ ಈ ಸಾಹಸದಲ್ಲಿ ಹಿಂದೀ, ಕನ್ನಡ ಚಲನಚಿತ್ರ ಗೀತೆಗಳ ರಾಗದ ಧಾಟಿಯನ್ನು ಸೂಚಿಸಿರುವುದೇ ಅಲ್ಲದೆ ಪ್ರಸಿದ್ಧ ಗಾಯಕರಿಂದ ಹಾಡಲ್ಪಟ್ಟು ಜನ ಮನ್ನಣೆಗಳಿಸಿದ ಪದ್ಯಗಳ ಧಾಟಿಯನ್ನೇ ಅನುಸರಿಸಿ ತನ್ನ ಕೃತಿಗಳನ್ನು ರಚಿಸಿ ಅಲ್ಲದೇ ಆ ಕೃತಿಗಳಲ್ಲಿ ಅಡಕವಾಗಿರುವ ಸಂದೇಶಗಳು ಜನರ ಮನವನ್ನು ಮುಟ್ಟಲಿ ಅವರ ಅಂತಃಕರಣದ ಕದ ತೆರೆಯಲಿ ಎಂಬ ಆಶಯವಿದೆ. ಒಟ್ಟಿನಲ್ಲಿ ಅವರಿಂದ ಸನ್ನಡತೆ ಆಚರಿಸಲ್ಪಟ್ಟು ಈ ಭರತ ಖಂಡ ಮರಳಿ ರಾಮ ರಾಜ್ಯವಾಗಲಿ ಎಂಬ ಆಶಯವನ್ನು ಹೊಂದಿರುವುದು ಕಾಣಬಹುದು.

ಭಾಮಿನಿ ಲಯ, ಸಾಂಗತ್ಯ ಹಾಗೂ ಚತುಷ್ಪದಿಗಳ ಛಂದೋ ಮಾಧ್ಯಮದಲ್ಲಿ ಕವಿತೆಯನ್ನು ರಚಿಸುವ ಸಾಹಸವನ್ನು ಕೈಗೊಂಡ ಕವಯತ್ರಿ ಆ ಛಂದೋಬಂಧದಲ್ಲಿ ಒಂದೊಂದು ವಿವರಣೆಯನ್ನು ಸ್ಥೂಲವಾಗಿ ನೀಡಿರುವುದನ್ನು ಗಮನಿಸಿದಾಗ ತನ್ನ ಮನದ ಅಭಿಪ್ರಾಯವನ್ನು ಪಾತ್ರಗಳ ಮೂಲಕ ಭಿತ್ತರಿಸುವುದಕ್ಕೆ ಆ ಛಂದೋ ಮಾಧ್ಯಮವನ್ನು ಅನುಸರಿಸಿದ್ದಾರೆ ಎನ್ನುವುದು ಸ್ಪಷ್ಟವಾಗುತ್ತದೆ. ' ಅನಂತಮತಿ ಚರಿತೆ ' ಎಂಬ ಕೃತಿ ಭಾಮಿನಿ ಷಟ್ಪದಿಯಲ್ಲೇ ರಚಿಸಲಾಗಿರುವುದನ್ನು ಕಾಣಬಹುದು. ಅಂತೆಯೇ ವೇಶ್ಯೆಯೊಬ್ಬಳ ಕಥಾನಕವನ್ನು ಹೊಂದಿದ ಕೃತಿ ' ಲಕ್ಷ್ಮೀಬಾಯಿ ' ಯು ಚತುಷ್ಪದಿಯಲ್ಲಿ ನಿರ್ಮಾಣಗೊಂಡಿರುವುದನ್ನು ಕಾಣುತ್ತೇವೆ, ' ವರ್ಧಮಾನ ಚರಿತ್ರೆ'ಯು ಸಾಂಗತ್ಯದಿಂದ ರಚಿಸಲಾಗಿದ್ದು ಇವೆಲ್ಲಾ ರಚನ ಮಾಧ್ಯಮಗಳು ಕವಿ ಹೃದಯಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ತನ್ನ ಅಪಾರವಾದ ಜ್ಞಾನ ಸಂಪತ್ತನ್ನು 'ಪ್ರಾಪಂಚಿಕರ ' ಹಿತೋಪದೇಶಕ್ಕಾಗಿ ದಾರೆಯೆರೆಯುವ ಉದ್ದೇಶ ಕವಯತ್ರಿಯ ಧಾರ್ಮಿಕ ಮನೋಧರ್ಮವನ್ನು ವ್ಯಕ್ತ ಪಡಿಸುತ್ತದೆ. ಬಡತನ ಹಾಗೂ ಯಾವುದೇ ತೆರನಾದ ಪ್ರೋತ್ಸಾಹವಿಲ್ಲದೇ ವಂಚಿತರಾದ ಈ ಲೇಖಕಿಯ ಸಾಹಸವನ್ನು ಗಮನಿಸಿದಾಗ ಪ್ರಾಪಂಚಿಕರಲ್ಲಿಜಾಗೃತಿಯನ್ನು ಉಂಟು ಮಾಡಿದಾಗಲೇ ತನ್ನ ಶ್ರಮ ಸಾರ್ಥಕ ಎಂದು ಭಾವಿಸಿಕೊಂಡಂತೆ ಕಂಡು ಬರುತ್ತದೆ. ಪ್ರತೀ ಗ್ರಂಥದ ಪಂತ ಹಂತದಲ್ಲೂ ಲೇಖಕಿ ತಮ್ಮ ಆತ್ಮ ನಿವೇದನೆಯನ್ನು ಸ್ಪಷ್ಟವಾಗಿ ಮಾಡಿದ್ದಾರೆ. ಮಲ್ಲಿಗೆಯ ಹೂವನ್ನು ಮು ಚ್ಚಿಟ್ಟರೂ ಪರಿಮಳವು ಪ್ರಕಟವಾಗುವಂತೆ ಗಂಧದ ಕೊರಡನ್ನು ಅಡಗಿಸಿಟ್ಟರು ಪರಿಮಳ ವ್ಯಕ್ತವಾಗುವಂತೆ ಯಾವುದೇ ಪ್ರೋತ್ಸಾಹಗಳಿಂದ ತಾಸು ವಂಚಿತಳಾಗಿ ಅಜ್ಞಾತಳಾಗಿದ್ದರೂ ತನ್ನ ಮನದ ಇಚ್ಛೆಯನ್ನೂ ಹೊಂದಿದ ಈ ಕೃತಿಗಳು ಗಂಧರಂತೆಯೂ, ಮಲ್ಲಿಗೆಯ ಹೂವಿನಂತೆಯೂ ಸಾರ್ವಕಾಲಿಕವಾಗಿ ಕಂಪನ್ನು ಸೂಸುತ್ತಿರಲಿ ಎಂಬ ಕವಯತ್ರಿಯ ಆಶಯ ಪೂರ್ಣವಾಗಬೇಕಿದೆ. ನಶ್ವರವಾದ ಈ ಕಾಯ ನಾಶಗೊಂಡರೂ ತನ್ನ ಕೃತಿಯು ಮತ್ತು ಅದರಲ್ಲಿರುವ ಸಂದೇಶವು ಅಜರಾಮರವಾಗಿರಲಿ ಎಂಬ ಇಚ್ಛೆಯನ್ನು ಕವಯತ್ರಿ ಹೊಂದಿದ್ದರು ಎನ್ನುವುದಕ್ಕೆ ಈ ಕೃತಿಗಳೇ ಸಾಕ್ಷಿಯಾಗಿವೆ.

ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಮಹಿಳೆಯರ ಸಾಧನೆಗಳೇನು ಎಂಬುದನ್ನು ಅವಲೋಕಿಸಿದರೆ ಈಗಾಗಲೇ ಗುರುತಿಸಿದಂತೆ ಅದು ತೀರ ವಿರಳ ಎನ್ನುವುದು ತಿಳಿದು ಬರುತ್ತದೆ. ಪುರುಷ ಪ್ರಧಾನ ಸಮಾಜ, ಪಿತೃ ಪ್ರಧಾನ ವ್ಯವಸ್ಥೆ ಹಾಗೂ ಈ ಕಾಲದಲ್ಲಿ ಸ್ತ್ರೀಯರಿಗೆ ದೊರಕದಿರುವ ಸ್ವಾತಂತ್ರ್ಯ ಹಾಗೂ ಅವಳು ಮಾಡುತ್ತಿದ್ದ ಕೆಲಸವನ್ನು ಉಪೇಕ್ಷಿಸಿದ ಕಾರಣ ಅವಳು ಸಮಾಜದಲ್ಲಿ ಗಣನೀಯ ಸಾಧನೆಯನ್ನು ಮಾಡಲು ಸಾಧ್ಯವಾಗಲಿಲ್ಲ. ಇಂತಹ ಪರಿಸ್ಥಿತಿಯಲ್ಲೂ ಕವಯತ್ರಿ ರಾಧಮ್ಮ ಕೃತಿಗಳನ್ನು ರಚಿಸಿರುವುದನ್ನು ನಾವು ಗಮನಿಸಬೇಕಾಗಿದೆ, ಇವರಂತೆ ಎಲೆ ಮರೆಯ ಕಾಯಂತಿದ್ದು ಯಾರ ಗಮನಕ್ಕೂ ಬಾರದೆ ಹಣ್ಣಾಗಿ ಉದುರಿಹೋದವರೂ ಇರಬಹುದು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಮಹಿಳೆಯರ ಸಾಹಿತಿಕ ಸಾಧನೆಗಳೇನು ಎಂಬುದರ ಕುರಿತು 'ಕರಾವಳಿ ಲೇಖಕಿಯ ಸಂಘ ' ಹುಡುಕಾಟ ನಡೆಸಿದಾಗ ' ರಾಧಮ್ಮ ' ನವರಂತ ಪ್ರತಿಭಾವಂತ ಮಹಿಳೆಯ ಪರಿಚಯ ಸಾಹಿತ್ಯ ಲೋಕಕ್ಕಾಯಿತು. ಇವರು ಜೀವಿಸಿದ್ದ ಕಾಲಘಟ್ಟವನ್ನು ಗಮನಿಸಿದಾಗ ನಿಜವಾಗಿಯೂ ಆಶ್ಚರ್ಯ ಹಾಗೂ ಅಭಿಮಾನವುಂಟಾಗುತ್ತದೆ. ಈ ಕಾಲದಲ್ಲಿ ದ.ಕ ಜಿಲ್ಲೆಯಲ್ಲಿ ಮೇರು ವ್ಯಕ್ತಿತ್ವಗಳೆಂದೆನಿಸಿದ ಮಂಜೇಶ್ವರ ಗೋವಿಂದ ಪೈ, ಕಡೆಂಗೋಡ್ಲು ಶಂಕರ ಭಟ್ಟ, ಮುದ್ದಣ್ಣ, ಮುಳಿಯ ತಿಮ್ಮಪ್ಪನವರಂತಹ ಮಹಾನ್ ಸಾಹಿತಿಗಳು ಸಾಹಿತ್ಯ ರಚಿಸಿದ ಸಂದರ್ಭವದು. ಅದೇ ಕಾಲದಲ್ಲಿ ಮಹಿಳೆಯೋರ್ವರು ಶ್ರೇಷ್ಠ ಕೃತಿಗಳನ್ನು ರಚಿಸಿದ್ದೂ ಅಜ್ಞಾತರಾಗಿ ಉಳಿದಿರುವುದು ಸೋಜಿಗದ ವಿಚಾರ.

ಶ್ರೇಷ್ಠ ಕೃತಿಗಳನ್ನು ರಚಿಸಿದ ಮಹಾನ್ ಕವಯತ್ರಿ ರಾಧಮ್ಮನವರ ಸಮಗ್ರ ಸಾಹಿತ್ಯದ ಅಧ್ಯಯನಗೊಂಡು ಪುಸ್ತಕದ ರೂಪದಲ್ಲಿ ಪ್ರಕಟಗೊಳ್ಳಬೇಕಾಗಿದೆ. ಕರಾವಳಿ ಲೇಖಕಿಯರ ಸಂಘ ಮೊತ್ತ ಮೊದಲ ಬಾರಿಗೆ ಕವಯತ್ರಿ ರಾಧಮ್ಮನವರನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಪರಿಚಯಿಸಿ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಇವರ ಕೆಲಸವು ಶ್ಲಾಘನಾರ್ಹವಾಗಿರುವುದು.

# ಅನುಬಂಧ

ಅ. ಶ್ರೀಮತಿ ರಾಧಮ್ಮನವರ ಪ್ರಕಟಿತ ಕೃತಿಗಳು :-

೧. ಧರ್ಮಪಾಲ ಇಂದ್ರ ಮೂಡಾರು (ಸಂ), ನೆಲ್ಲಿಕಾರು ಜೈನ ಮಹಿಳೆ ರಾಧಮ್ಮ (ಲೇ), ನನ್ನ ಭಾವನೆ (ಅನು) , ಶ್ರೀ ಸಿದ್ಧಾಂತ ಕೀರ್ತಿ ಗ್ರಂಥಮಾಲೆ, ಹೊಂಬುಜ, ಶಿವಮೊಗ್ಗ ಜಿಲ್ಲೆ, ೧೯೮೬.

೨. ಧರ್ಮಪಾಲ ಇಂದ್ರ ಮೂಡಾರು (ಸಂ), ನೆಲ್ಲಿಕಾರು ಜೈನ ಮಹಿಳೆ ರಾಧಮ್ಮ, ಅನಂತಮತಿ ಚರಿತೆ ೧೯೮೬.

೩. ಧರ್ಮಪಾಲ ಇಂದ್ರ ಮೂಡಾರು (ಸಂ), ನೆಲ್ಲಿಕಾರು ಜೈನ ಮಹಿಳೆ ರಾಧಮ್ಮ, ಲಕ್ಷ್ಮೀಬಾಯಿ ೧೯೮೬.

೪. ಧರ್ಮಪಾಲ ಇಂದ್ರ ಮೂಡಾರು (ಸಂ), ನೆಲ್ಲಿಕಾರು ಜೈನ ಮಹಿಳೆ ರಾಧಮ್ಮ,ಸಂಗೀತ ಪೂಜಾಷ್ಟಕ ೧೯೮೬.

೫. ಧರ್ಮಪಾಲ ಇಂದ್ರ ಮೂಡಾರು (ಸಂ) ಮತ್ತು (ಪ್ರ) , ಸಂಗೀತ ಪೂಜಾ ಸಂಗ್ರಹ ೧೯೫೯.

೬. ನೆಲ್ಲಿಕಾರು ಜೈನ ಮಹಿಳೆ ರಾಧಮ್ಮ ಮತ್ತು ಡಿ. ಪದ್ಮನಾಭ ಶರ್ಮ ಭುವನ ಹಳ್ಳಿ (ಲೇ), ವರ್ಧಮಾನ ಚರಿತೆ, ಶ್ರೀ ಸಿದ್ಧಾಂತ ಕೀರ್ತಿ ಗ್ರಂಥಮಾಲೆ, ಹೊಂಬುಜ, ಶಿವಮೊಗ್ಗ ಜಿಲ್ಲೆ, ೧೯೯೩.

ಆ. ಆಧಾರ ಗ್ರಂಥಗಳು :-

೧. ಉಮಾನಾಥ ಶೆಣೈ. ವೈ, ಕನ್ನಡ ಸಾಹಿತ್ಯಕ್ಕೆ ಮೂಡಬಿದ್ರೆಯ ಕೊಡುಗೆ, ಪ್ರ. ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ, ೧೯೮೮.

೨. ಉದಯವರ್ಮರಾಜ,ತುಳುನಾಡಿನ ಗತವೈಭವ, ಕನ್ನಡ ಸಾಹಿತ್ಯ ಪರಿಷತ್ತು ಕೇರಳ ಘಟಕ, ಕಾಸರಗೋಡು ೧೯೯೮.

೩. ಎರ್ತೂರು ಶಾಂತಿರಾಜ ಶಾಸ್ತ್ರೀಗಳವರು (ಸಂ) ಮತ್ತು (ಅನು) , ಮಹಾ ಪುರಾಣ, ಪ್ರ. ಪಂಡಿತ ರತ್ನ ಎ. ಶಾಂತಿರಾಜ ಶಾಸ್ತ್ರಿ ಟ್ರಸ್ಟ್, ಬೆಂಗಳೂರು ೨೯೯೩.

೪. ಕಮಲಾ ಹಂಪನಾ ,ಬೊಗಸೆ (ಮಹಿಳೆ ಸುತ್ತ - ಮುತ್ತ ) , ಪ್ರ. ಸಿ. ಟಿ.ಜೆ ಪಬ್ಲಿಕೇಷನ್, ಬೆಂಗಳೂರು, ೨೦೦೩.

೫. ಕೃಷ್ಣರಾವ್. ಎಂ.ಎ. , ಇತಿಹಾಸದರ್ಶಿನಿ, ಪ್ರ ೧೧೧೯.

೬ ಜನಾರ್ಧನ ಭಟ್ .ಬಿ (ಸಂ ) , ದಕ್ಷಿಣ ಕನ್ನಡದ ಶತಮಾನದ ಕಾವ್ಯ ೧೯೦೦- ೨೦೦೦, ಪ್ರ. ಕನ್ನಡ ಸಂಘ ಕಾಂತಾವಾರ ಪುತ್ತೂರು, ಕಾರ್ಕಳ, ೨೦೦೧,

೭. ದೇವರಕೊಂಡರೆಡ್ಡಿ, ಜಯಪ್ರಕಾಶ್ ಮಾವಿನಕುಳಿ (ಸಂ|) ತುಳುನಾಡಿನ ಜೈನ ಶಾಸನಗಳು ಪ್ರಸಾರಾಂಗ ಕ.ವಿ.ವಿ. ಹಂಪಿ ೨೦೦೪.

೮. ಪಾದೇಕಲ್ಲು ವಿಷ್ಣು ಭಟ್ಟ (ಸಂ ) , ತುಳುವರಿವರು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿ ೧೯೯೭.|

೯. ಪಾದೇಕಲ್ಲು ವಿಷ್ಣು ಭಟ್ಟ (ಪ್ರ.ಸಂ ) , ಸಂಸ್ಮರಣ ಸಂಚಿಕೆ, ಪ್ರ. ಸ್ವಾಗತ ಸಮಿತಿ ಕಾರ್ಕಳ ತಾಲೂಕು ಮೂರನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಹೆಬ್ರಿ, ೧೯೯೫ .

೧೦. ಮನೋರಮ ಎಂ. ಭಟ್ ( ಸಂ ) , ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಲೇಖಕಿಯರು, ಪ್ರ ಕರಾವಳಿ ಲೇಖಕಿಯರ - ವಾಚಕಿಯರ ಸಂಘ, ದಕ್ಷಿಣ ಕನ್ನಡ , ಕಾಸರಗೋಡು ೧೯೯೬.

೧೧. ಬಿ. ವಿ. ಮಲ್ಲಾಪುರ ( ಸಂ ) , ಅಲ್ಲಮ ಪ್ರಭು ದೇವರ ವಚನ ಸಂಪುಟ, ಪ್ರ ಕನ್ನಡ ಪುಸ್ತಕ ಪ್ರಾಧಿಕಾರ ೨೦೦೧.

೧೨. ಮಂಜೇಶ್ವರ ಗಣಪತಿ ಐಗಳ, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ , ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ, ೨೦೦೪.

೧೩. ಮುಕುಂದ ಪ್ರಭು ಎಂ. ( ಪ್ರ ಸಂ |) ಪೊಲಿ, ಜಿಲ್ಲಾಡಳಿತ ಮಂಗಳೂರು ೨೦೦೦.

೧೪. ಲೋಲಾಕ್ಷಿ.ಎನ್.ಕೆ, (ಸಂ|) ಕನ್ನಡ ಪತ್ರಿಕೆಗಳು ಮತ್ತು ಮಹಿಳೆ ಕನ್ನಡ ಅಧ್ಯಯನ ವಿಭಾಗ, ಮಂಗಳೂರು ೨೦೦೬.

೧೫. ಶ್ರೀಮತಿ.ಎಚ್.ಎಸ್. (ಸಂ ) ,ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೧೬. ಶೆಟ್ಟಿ. ಎಸ್. ಡಿ, ತುಳುನಾಡಿನ ಜೈನ ಧರ್ಮ, ಪ್ರ. ರಾಷ್ಟ್ರ ಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೨೦೦೨,|

೧೭. ಶೆಟ್ಟಿ. ಎಸ್.ಡಿ, ದಕ್ಷಿಣ ಕನ್ನಡ ಜಿಲ್ಲೆಯ ಜೈನ ಧರ್ಮ ಪರಂಪರೆ ಮತ್ತು ಅದರ ವಿಶಿಷ್ಟ ಸಂಪ್ರದಾಯಗಳು, ಪ್ರ. ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ, ಉಜಿರೆ,೨೦೦೦.

೧೮. ಶೆಟ್ಟಿ.ಎಸ್. ಡಿ ಮತ್ತು ಗುಣಪಾಲ ಕಡಂಬ ( ಸಂ ) , ಅನಂತಶ್ರೀ ಸಂಸ್ಕರಣ ಸಂಚಿಕೆ, ಪ್ರ. ಶ್ರೀ ಅನಂತನಾಥ ಸ್ವಾಮಿ ಪಂಚ ಕಲ್ಯಾಣ ಮಹೋತ್ಸವ ಸಮಿತಿ, ನೆಲ್ಲಿಕಾರು, ೧೯೮೬.

೧೯. ಸತ್ಯ ನಾರಾಯಣ ಮಲ್ಲಿ ಪಟ್ಟಣ, ದಕ್ಷಿಣ ಕನ್ನಡದ ಕಾವ್ಯ ಮತ್ತು ಪ್ರಾದೇಶಿಕತೆ, ಪ್ರ, ಪ್ರಸಾರಾಂಗ, ಮಂಗಳೂರು ವಿಶ್ವ ವಿದ್ಯಾಲಯ, ಮಂಗಳೂರು, ೧೯೯೯.

೨೦. ಸಿ.ಪಿ.ಕೆ. ಜೈನ ಸಾಹಿತ್ಯ ಕೆಲವು ನೋಟಗಳು, ಪ್ರ, ಚೇತನಾ ಬುಕ್ ಹೌಸ್, ಮೈಸೂರು,೨೦೦೬.

೨೧. ಸಂತೋಷ್ ಚೊಕ್ಕಾಡಿ, ದಕ್ಷಿಮ ಕನ್ನಡಕಾವ್ಯದ ವಿಭಿನ್ನ ನೆಲೆಗಳು, ಪ್ರ, ಕರ್ನಾಟಕ ಸಂಘ, ಪುತ್ತೂರು, ೨೦೦೨ .

೨೨. ಹೆರಂಜೆ ಕೃಷ್ಣ ಭಟ್, ಮುರಳೀಧರ ಉಪಾಧ್ಯಾಯ (ಸಂ ) ಗೋವಿಂದ ಪೈ ಸಂಶೋಧನ ಸಂಪುಟ ರಾಷ್ಟ್ರೀಯ ಗೋವಿಂದ. ಪೈ ಸಂಶೋಧನ ಕೇಂದ್ರ, ಉಡುಪಿ, ೧೯೯೫.

೯. ಆಧಾರ ಲೇಖನಗಳು :-

೧. ಉಮಾನಾಥ ಶೆಣೈ .ವೈ - ಕನ್ನಡ ಸಾಹಿತ್ಯಕ್ಕೆ ಮೂಡಬಿದ್ರೆ ಕೊಡುಗೆ - ರಾಧಮ್ಮ.

೨. ಕಮಲಾ ಹಂಪನಾ - ಬೊಗಸೆ ಮಹಿಳೆ (ಸುತ್ತ ಮುತ್ತ) - ಅಜ್ಞಾತ ಕವಿಯತ್ರಿಯರು.

೩. ಕಮಲಾ ಹಂಪನಾ - ಬೊಗಸೆ ಮಹಿಳೆ (ಸುತ್ತ ಮುತ್ತ) - ತೆಂಕನಾಡಿನ ಕೋಗಿಲೆ.

೪. ಗೋವಿಂದ ಪೈ ವಾಜ್ಮಯ ದರ್ಶನ, ಲಕ್ಷ್ಮೀಬಾಯಿ.

೫. ಲೀಲಾ ಭಟ್ - ದಕ್ಷಿಣ ಕನ್ನಡದ ಮೊದಲ ಲೇಖಕಿಯರು - ರಾಧಮತಿ ಜೈನ ಮಹಿಳೆ

೬. ಶ್ರೀಮತಿ ಎಚ್. ಎಸ್ - ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ - ೧೯೦೦ - ೧೯೫೦ ರ ವರೆಗಿನ ಮಹಿಳಾ ಸಾಹಿತಿಗಳು.

೭. ಹೆಬ್ಬೇರಿ - ಕಾರ್ಕಳ ತಾಲೂಕು ಮೂರನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ.

**ಈ. ಪತ್ರಿಕೆಗಳು :-**

೧. ಕಂಠೀರವ, ದಸರಾ ಸಂಚಿಕೆ, ೧೯೩೪.

೨. ಕರ್ನಾಟಕ ಕೇಸರಿ, ತಿಳಿಗನ್ನಡ ಮಾಸ ಪತ್ರಿಕೆ, ಪುತ್ತೂರು, ೧೯೨೮.

೩. ವಿವೇಕಾಭ್ಯುದಯ, ಮಾಸ ಪತ್ರಿಕೆ, ಮಂಗಳೂರು. ೧೯೫೫.

**ಉ. ಮಾಹಿತಿದಾರರ ಹೆಸರು ಮತ್ತು ವಿಳಾಸಗಳು :-**

೧. ಶ್ರೀ ಆದಿರಾಜ ಹೆಗ್ಗಡೆ , ಹಿರಿಯಂಗಡಿ ಬಸದಿ ಬಳಿ, ಕಾರ್ಕಳ.

೨. ಶ್ರೀ ಪದ್ಮನಾಭ ಶೆಟ್ಟಿ, ನೆಲ್ಲಿಕಾರು ಪೋಸ್ಟ್, ನೆಲ್ಲಿಕಾರು.

೩. ಶ್ರೀ ಪ್ರಕಾಶ್ ಬಲ್ಲಾಳ್, ನೆಲ್ಲಿಕಾರು ಪೋಸ್ಟ್, ನೆಲ್ಲಿಕಾರು.

೪. ಶ್ರೀಮತಿ ಪ್ರಭಾವತಿ ಅಮ್ಮ, ನೆಲ್ಲಿಕಾರು ಪೋಸ್ಟ್, ನೆಲ್ಲಿಕಾರು.

೫. ಡಾ| ನಾಭಿರಾಜ ಶೆಟ್ಟಿ, ಅಳಕೆ, ಮಂಗಳೂರು.

೬. ಶ್ರೀ ಪ್ರಸನ್ನ ಇಂದ್ರ, ನೆಲ್ಲಿಕಾರು ಬಸದಿ , ನೆಲ್ಲಿಕಾರು.

೭. ಶ್ರೀ ಜ್ಞಾನ ಚಂದ್ರ ಶೆಟ್ಟಿ, ಕೆಳಗಿನ ಮನೆ , ನೆಲ್ಲಿಕಾರು.

೮. ಶ್ರೀ ಮುನಿರಾಜ್ ಮಾಸ್ಟರ್, ತಮನಂಗಡಿ, ಮೂಡಬಿದ್ರೆ.

೯. ಶ್ರೀ ಆದಿರಾಜ ಮಾಸ್ಟರ್, ತಮನಂಗಡಿ, ಮೂಡಬಿದ್ರೆ.

೧೦. ಶ್ರೀಮತಿ ರೋಹಿಣಿ ಆದಿರಾಜ್ , ತಮನಂಗಡಿ, ಮೂಡಬಿದ್ರೆ.

೧೧. ಶ್ರೀಮತಿ ರೇವತಿ ಬಲ್ಲಾಳ್, ಬಲ್ಲಾಳ್ ಕಂಪೌಂಡ್, ಬಜ್ಪೆ.

೧೨. ಶ್ರೀ ದೇವರಾಜ್ ಹೆಗ್ಗಡೆ, ದೇರೆಬೈಲ್, ಮಂಗಳೂರು.

೧೩. ಶ್ರೀ ಅಜಿತ್ ಕುಮಾರ್ ಪ್ರಸಾದ್, ಧವಳಾ ಕಾಲೇಜು, ಮೂಡಬಿದ್ರಿ.

೧೪. ಶ್ರೀಮತಿ ಸುಶೀಲ ನೆಲ್ಲಿಕಾರು.

೧೫. ಶ್ರೀಮತಿ ಅಮ್ಮಾಜಿ ಮೂಡಾರು ಬಜಗೋಳಿ, ಕಾರ್ಕಳ.

## ಊ. ಛಾಯಾಚಿತ್ರಗಳು



ಶ್ರೀ. ಎನ್.ಎಸ್. ಜೈನ್ ಮತ್ತು ಶ್ರೀಮತಿ ರಾಧಮ್ಮ



ಶ್ರೀ. ಪದ್ಮನಾಭ ಜೈನ್
(ರಾಧಮ್ಮನವರ ಹಿರಿಯ ಮಗ)



ಯೌವ್ವನದಲ್ಲಿ ರಾಧಮ್ಮ



ಶ್ರೀಮತಿ ರೇವತಿ ಬಲ್ಲಾಳ್
(ರಾಧಮ್ಮನವರ ಹಿರಿಯ ಮಗಳು)

ಕವಯಿತ್ರಿ ನೆಲ್ಲಿಕಾರು 'ಜೈನಮಹಿಳೆ'
ಸ್ವರ್ಗೀಯ ಶ್ರೀಮತಿ ರಾಧಮ್ಮನವರಿಂದ
ವಿರಚಿತ

## ನನ್ನ ಭಾವನೆ

---

ಕವಯಿತ್ರಿ ನೆಲ್ಲಿಕಾರು 'ಜೈನಮಹಿಳೆ'
ಸ್ವರ್ಗೀಯ ಶ್ರೀಮತಿ ರಾಧಮ್ಮನವರಿಂದ

## ಶ್ರೀ ಅನಂತಮತೀ ಚರಿತೆ

---

ಕವಯಿತ್ರಿ ನೆಲ್ಲಿಕಾರು 'ಜೈನಮಹಿಳೆ'
ಸ್ವರ್ಗೀಯ ಶ್ರೀಮತಿ ರಾಧಮ್ಮನವರಿಂದ
ವಿರಚಿತ

## ಶ್ರೀ ಲಕ್ಷ್ಮೀ ಬಾಯಿ

---

|| ಶ್ರೀ ವೀತರಾಗಾಯ ನಮಃ ||

# ಸಂಗೀತಪೂಜಾಸಂಗ್ರಹ

(ಸ್ತೋತ್ರ, ಮಂತ್ರ, ಅರ್ಚನೆ, ಭಜನೆ ಸಹಿತ)

ಸಂಪಾದಕ ಮತ್ತು ಪ್ರಕಾಶಕ:
ವೇ|| ಎಂ. ಧರ್ಮಪಾಲ ಇಂದ್ರ,
ಕಾರ್ಕಳ, ದ. ಕ.

ವೀರಸಂವತ್ ೨೪೮೫
(ಪ್ರಥಮ ಮುದ್ರಣ)

---

ಶ್ರೀ ವೀತರಾಗಾಯ ನಮಃ

# ಅರ್ಚನಾಷ್ಟಕ

ರಚಯಿತರು:
ಸ್ವರ್ಗೀಯ ರಾಧಮ್ಮನವರು.
'ಜೈನ ಮಹಿಳೆ'

ಪ್ರಕಾಶಕರು:
ಶ್ರೀ ಧನ್ಯಕುಮಾರ ಎಸ್. ಜೈನಿ,
ಶ್ರಾವಿಕಾಶ್ರಮ ಹೈಸ್ಕೂಲು,
ಸೋಲಾಪುರ.

೧೫-೮-೧೯೬೦. ಶಾಸ್ತ್ರದಾನ.

ಕವಯಿತ್ರಿ ನೆಲ್ಲಿಕಾರು 'ಜೈನಮಹಿಳೆ'

## ಸ್ವರ್ಗೀಯ ಶ್ರೀಮತಿ ರಾಧಮ್ಮನವರಿಂದ

ಮತ್ತು

ಕವಿ ನೆಲ್ಲಿಕಾರು

## ಸ್ವರ್ಗೀಯ ಶ್ರೀ ಚಂದಯ್ಯ ಶಾಸ್ತ್ರಿಗಳಿಂದ

ವಿರಚಿತ

# ಸಂಗೀತ ಪೂಜಾಷ್ಟಕ

ಸಂಪಾದಕರು :

**ಮೂಡಾರು ಧರ್ಮಪಾಲ ಇಂದ್ರ**

ಪ್ರಕಾಶಕರು :

**ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ**

ಶ್ರೀ ಹೊಂಬುಜ ಜೈನಮಠ

ಹೊಂಬುಜ – 577 436 ಶಿವಮೊಗ್ಗ ಜಿಲ್ಲೆ

ಶ್ರೀ ವೀತರಾಗಾಯ ನಮಃ

# ವರ್ಧಮಾನ ಚರಿತೆ

ಲೇಖಕರು :

**ದಿ|| ಶ್ರೀಮತಿ ರಾಧಾದೇವಿ, ನೆಲ್ಲಿಕಾರು**

ಮತ್ತು

ಜೈನಸಾಹಿತ್ಯಭೂಷಣ, ವಿದ್ಯಾವಿಭೂಷಣ,
ಸಿದ್ಧಾಂತ ಶಿರೋಮಣಿ, ಜೈನಸಿದ್ಧಾಂತವಾರಿಧಿ

**ಶ್ರೀ ಡಿ. ಪದ್ಮನಾಭಶರ್ಮ, ಭುವನಹಳ್ಳಿ**

ಪ್ರಕಾಶಕರು :

**ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ**
**ಶ್ರೀ ಜೈನಮಠ, ಹೊಂಬುಜ–577 436**
**ಶಿವಮೊಗ್ಗ ಜಿಲ್ಲೆ**

ಕವಯಿತ್ರಿ ನೆಲ್ಲಿಕಾರು 'ಜೈನಮಹಿಳೆ'

ಸ್ವರ್ಗೀಯ ಶ್ರೀಮತಿ ರಾಧಾಮ್ಮನವರಿಂದ ವಿರಚಿತ

# ಶ್ರೀ ಜಿನೇಶ್ವರ ಭಕ್ತಿಗೀತೆಗಳು

ಕವಯಿತ್ರಿ ನೆಲ್ಲಿಕಾರು 'ಜೈನಮಹಿಳೆ'

ಸ್ವರ್ಗೀಯ ಶ್ರೀಮತಿ ರಾಧಮ್ಮನವರಿಂದ ವಿರಚಿತ

# ಶ್ರೀ ಜಿನೇಶ್ವರ ಪೂಜಾಷ್ಟಕಗಳು

